


# ಕುಮಾರವ್ಯಾಸನ ಕೃಷ್ಣ

ಎನ್ಕೆ

ಜುಲೈ, ೧೯೮೪



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಉಪನ್ಯಾಸ ಗ್ರಂಥಮಾಲೆ

೩೪೮

# ಕುಮಾರವ್ಯಾಸನ ಕೃಷ್ಣ

ಎನ್ಕೆ



ಪ್ರಸಾರಾಂಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಜುಲೈ, ೧೯೮೪

ಪ್ರಕಾಶಕರು :

**ಎಸ್. ಬಿ. ನಾಯಕ,** ಎಂ.ಎ.
ಕಾರ್ಯನಿರ್ವಾಹಕ ನಿರ್ದೇಶಕರು
ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

ಪ್ರಥಮ ಮುದ್ರಣ : ೫,೦೦೦ ಪ್ರತಿಗಳು
ಜುಲೈ, ೧೯೮೪



ಬೆಲೆ : ೫೦ ಪೈಸೆ

ಮುದ್ರಕರು :

**ಎಚ್. ಗಂಗಯ್ಯ,** ಎಂ.ಎಸ್‌ಸಿ.
ನಿರ್ದೇಶಕರು,
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ
ಧಾರವಾಡ-೫೮೦ ೦೦೩

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನ ಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು, ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ, ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನ ಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ

ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯುವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯುಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯು.

ಈ ಮಾಲೆಯುಲ್ಲಿ ಈಗಾಗಲೇ ೩೪೭ ಪುಸ್ತಕಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ನಾಲ್ಕು-ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯು ಉಪಯುಕ್ತತೆಯುನ್ನೂ ಜನಪ್ರಿಯುತೆಯುನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯು ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯುದ ಈ ಸೇವೆಯು ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿ ಯುಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯು
ಧಾರವಾಡ

**ಎಸ್. ಜಿ. ದೇಸಾಯಿ**
ಕುಲಪತಿಗಳು

## ಅರಿಕೆ

'ಕುಮಾರವ್ಯಾಸನ ಕೃಷ್ಣ' ಎಂಬೀ ಕಿರು ಹೊತ್ತಿಗೆ ಈ ಹಿಂದೆ ನಾನು ಮಾಡಿದ ಉಪನ್ಯಾಸದ ಲಿಖಿತ ರೂಪ.

ಭಾಗವತದ ಶ್ರೀಕೃಷ್ಣನು ಗೋಪೀರಾಸಲೋಲನಾಗಿ ಮುರಲೀಧರನೆನಸಿದರೆ, ಭಾರತದ ಶ್ರೀಕೃಷ್ಣನು ಪಾಂಚಜನ್ಯ ಧಾರಿಯಾಗಿ, ಪಾರ್ಥಸಾರಥಿಯಾಗಿ ಕುರುಕ್ಷೇತ್ರದಲ್ಲಿ ಅರ್ಜುನನಿಗೆ ಗೀತೋಪದೇಶಕನಾದ. ಯೋಗೇಶ್ವರನೆನಸಿದ.

ಜಿನಸೇನಾಚಾರ್ಯರ ಹರಿವಂಶ ಪುರಾಣದ ಕೃಷ್ಣನು ನೇಮಿನಾಥನ ಮುಂದೆ ಗೌಣ ಪುರುಷ. ಅಲ್ಲಿ ಕೃಷ್ಣನಿಗಿರುವುದು ಲೌಕಿಕ ಮಹತ್ವ. ಆತ ಶೃಂಗಾರ ಲೋಲುಪ. ಕೃಷ್ಣನಿಗಿಂತಲೂ ನೇಮಿನಾಥನು ಜ್ಞಾನ, ಯೋಗ, ತಪಗಳಲ್ಲಿ ಶ್ರೇಷ್ಠ

ಪಂಪನ ದೃಷ್ಟಿಯೂ ಇದೇ. ಕೃಷ್ಣನಲ್ಲಿ ದೈವೀಮಹಾತ್ಮೆ ಯನ್ನು ತೋರ್ಪಡಿಸದೆ ಅವನನ್ನು ಸಾಮಾನ್ಯನಂತೆ ಚಿತ್ರಿಸಿದ್ದಾನೆ. ಇದು ಜೈನ ದೃಷ್ಟಿ. ಶ್ರೀಕೃಷ್ಣನು ಬರಿ ಕೃಷ್ಣ.

ಕುಮಾರವ್ಯಾಸನಿಗೊ ಮಹಾಭಾರತವೆಲ್ಲ ಶ್ರೀಕೃಷ್ಣ ಕಥೆ. ಆತ ಭಕ್ತ ಕವಿ. ಪದುಮನಾಭನ ಮಹಿಮೆಯನ್ನು ಕಾಣಿಸಲೆಂದೆ ತನ್ನ 'ಕರ್ಣಾಟ ಭಾರತ ಕಥಾಮಂಜರಿ'ಯನ್ನು ರಚಿಸಿದ. ಪದಮನಾಭನ ಮಹಿಮೆ ಇರುವುದು ಆತನ ಮಾನವೀಯತೆಯಲ್ಲಿ. ಮಾನವ ಕಲ್ಯಾಣಕ್ಕಾಗಿಯೆ ಆತನ ಅವತಾರ. ದುಷ್ಕೃತರಿಂದಾಗುವ ಅನಿಷ್ಟಗಳನ್ನು ಪರಿಹರಿಸಲೆಂದೆ ಆತ ಮಾನವ ವೇಷಧಾರಿಯಾಗಿ ಮಾನವೀಯ ನಾಟಕವನ್ನಾಡುತ್ತಾನೆ. ಇದು ಕುಮಾರವ್ಯಾಸನ

ದೃಷ್ಟಿ–ಮಾನವರನ್ನೂ ದೇವತೆಗಳನ್ನೂ ಒಂದೆ ರಂಗದ ಮೇಲೆ ತಂದು ನಾಟಕವನ್ನಾಡಿಸುವುದು.

ಶ್ರೀಕೃಷ್ಣನ ಮಹಿಮೆ ಅಗಾಧ. ಆತ ಪುರಾಣಪುರುಷ, ಪವಾಡಪುರುಷ, ವೇದಪುರುಷ. ಆತನ ಲೀಲೆಗಳನ್ನು ತಿಳಿಯುವುದು ಕಷ್ಟಸಾಧ್ಯ. ಧರ್ಮವನ್ನು ಉದ್ಧರಿಸಲಿಕ್ಕೆಂದು ಅವತರಿಸಿಬಂದ ಈ ದಿವ್ಯ ಪುರುಷನು ಮಹಾಭಾರತದಲ್ಲಿ ಅಧರ್ಮವೆಂಬಂತೆ ಕಂಡುಬರುವ ಕೃತ್ಯಗಳನ್ನೆಸಗುತ್ತಾನೆ. ಆದರೆ ಆತನ ಸಂಕಲ್ಪದ ದೃಷ್ಟಿಯಿಂದ ಈ ತೋರಿಕೆಯ ಅಧರ್ಮ ನ್ಯಾಯ ಸಮ್ಮತವೆನಿಸುತ್ತದೆ. ಶ್ರೀಕೃಷ್ಣನ ಗೂಢ. ನಿಗೂಢ ಆಚರಣೆಗೆ ಕುಮಾರವ್ಯಾಸ ಭಕ್ತಿಯ ಕಣ್ಣು ಕೊಟ್ಟು ನೋಡ ಹಚ್ಚುತ್ತಾನೆ. ಈ ಬಾಲಲೀಲಾ ಪುರುಷನ, ಶೃಂಗಾರ ಪುರುಷನ, ಅಂತಿಮ ದೈವೀಸಂಕಲ್ಪವೇನು ಎಂಬುದನ್ನು ತೋರಿಸಿಕೊಡುತ್ತಾನೆ. ಕೃಷ್ಣನೆಂದರೆ ಕೃತ್ಸ್ನ–ಪರಿಪೂರ್ಣಗುಣ ಸಂಪನ್ನ.

ಶ್ರೀ ಅರವಿಂದರು ಶ್ರೀಕೃಷ್ಣನ ಯೌಗಿಕ ಎತ್ತರ ಅಧಿಮನದ ಮಟ್ಟದ್ದಾಗಿತ್ತೆಂದು ಒಂದೆಡೆಗೆ ಹೇಳಿದ್ದಾರೆ. ಶ್ರೀ ಕೃಷ್ಣನು ದೈವೀಪುರುಷ, ಅವತಾರಿಯಾದ ಮಹಾವಿಷ್ಣುರೂಪಿ ಎಂಬ ಶ್ರದ್ಧೆ, ಭಕ್ತಿಗಳ ಕಣ್ಣಿಗೆ ಆತ ಅಲೌಕಿಕ ಪುರುಷನಾಗಿ ಈತ ಐತಿಹಾಸಿಕವ್ಯಕ್ತಿ ಹೌದೆ? ಎಂಬ ಪ್ರಶ್ನೆಗೆ ಅವಕಾಶವೆ ಉಳಿಯುವುದಿಲ್ಲ.

ಈ ಕಿರುಹೊತ್ತಗೆಯಲ್ಲಿ ಇಷ್ಟೊಂದು ಸಮಗ್ರವಿವೇಚನೆಗೆ ಅವಕಾಶವಿಲ್ಲದಿದ್ದರೂ ಕೆಲವು ದೃಷ್ಟಿ ಕೋನಗಳನ್ನಿಲ್ಲಿ ಸೂಚಿಸುವ ಯತ್ನವಿದೆ.

ನನ್ನ ಉಪನ್ಯಾಸಕ್ಕೂ ಈ ಪುಸ್ತಕ ರೂಪಕ್ಕೂ ಕಾರಣಕರ್ತ-ರಾದ ಪ್ರಸಾರಾಂಗದ ಆಗಿನ ನಿರ್ದೇಶಕರಾಗಿದ್ದ ಮಾನ್ಯ ಶ್ರೀ ಚೆನ್ನವೀರ ಕಣವಿ ಅವರಿಗೂ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎಸ್. ಬಿ. ನಾಯಕ ಅವರಿಗೂ ಹಾಗೂ ಸಹಾಯಕ ನಿರ್ದೇಶಕರಾದ ಶ್ರೀ ಎಲ್.ಎಂ. ಗುಡ್ಡೀನ ಅವರಿಗೂ ಕೃತಜ್ಞ.

'ಪರಿಮಳ' —ಎನ್ಕೆ

ಕಲ್ಯಾಣನಗರ

ಧಾರವಾಡ ೫೮೦ ೦೦೭

## ಒಳಸಿಡಿ


| | | ಪುಟ |
|---|---|---|
| | ಮುನ್ನುಡಿ ... ... ... ... ... | iii |
| | ಅರಿಕೆ ... ... ... ... ... | v |
| ೧ | ಕುಮಾರವ್ಯಾಸನಿಗೆ ಇದು ಕೃಷ್ಣಕಥೆ ಮಾತ್ರ | ೧ |
| ೨ | ಭಕ್ತಕುಟುಂಬಿಯಾದ ಕೃಷ್ಣ | ೩ |
| ೩ | ಮಾನವನಾಟಕವನಾಡಿದ ಶ್ರೀಕೃಷ್ಣ | ೬ |
| ೪ | ಕೃಷ್ಣನ ಪೌರಾಣಿಕ ಮಹಾತ್ಮ್ಯೆ | ೧೩ |
| ೫ | ಭಕ್ತರ ಅಹಂಕಾರ ಮುರಿದ ಮುರಾರಿ | ೨೦ |
| ೬ | ದುರತ್ಯಯುವಾದ ದೈವೀಸಂಕಲ್ಪ | ೨೩ |
| ೭ | ಭಕ್ತಿಯ ಸ್ವರೂಪಗಳು | ೨೪ |
| ೮ | ಕೃಷ್ಣನ ಕರುಣಾನುಸಂಧಾನ | ೩೪ |
| ೯ | ಕುಮಾರವ್ಯಾಸನ ಕೃಷ್ಣನ ವೈಯಕ್ತಿಕತೆ | ೩೬ |
| ೧೦ | ಪಂಪ–ಲಕ್ಷ್ಮೀಶರ ಕೃಷ್ಣ | ೪೩ |
| ೧೧ | ಕೃಷ್ಣನ ರಕ್ಷಾಕವಚ | ೪೬ |
| ೧೨ | ಭಕ್ತಿಯ ಝೇಂಕಾರ ಹಾಗೂ ಶ್ರೀಕೃಷ್ಣನ ಅವತಾರ ಕಾರ್ಯ | ೫೧ |
| | ಗ್ರಂಥಋಣ | ೫೪ |

# ೧. ಕುಮಾರವ್ಯಾಸನಿಗೆ* ಇದು ಕೃಷ್ಣಕಥೆ ಮಾತ್ರ

## ಕೃಷ್ಣ ಕಥೆ

ತಿಳಿಯ ಹೇಳುವೆ ಕೃಷ್ಣಕಥೆಯನು
ಇಳೆಯ ಜಾಣರು ಮೆಚ್ಚುವಂತಿರೆ
ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ....

ಇದ ವಿಚಾರಿಸೆ ಬರಿಯ ತೊಳಸಿಯ
ವುದಕದಂತಿರೆಯಿಲ್ಲಿ ನೋಳ್ಪುದು
ಪದುಮನಾಭನ ಮಹಿಮೆ ಧರ್ಮವಿಚಾರ ಮಾತ್ರವನು.

ಗದುಗಿನ ಈ ದಶಪರ್ವ ಭಾರತದಲ್ಲಿ ಕವಿಗೆ ಕಾವ್ಯದುದ್ದಕ್ಕೂ ಕೃಷ್ಣ ಕಥೆಯನ್ನೆ ಹೇಳಬೇಕಾಗಿದೆ. ಕೃಷ್ಣನ ಬಗ್ಗೆ ತನಗಿರುವ ಭಕ್ತಿಯನ್ನು ಸಂದರ್ಭ ದೊರೆತಾಗಲೆಲ್ಲ ಮನದಣಿಯೆ ಹಾಡಿ ತೋಡಿಕೊಳ್ಳುತ್ತಾನೆ. ಬೇರೆ ಬೇರೆ ಪಾತ್ರಗಳ ಮುಖಾಂತರ, ಈ ಭಕ್ತಿ ಬಗೆ ಬಗೆಯಾಗಿ ಹೊರಸೂಸುತ್ತದೆ. ಈ ಮೂಲಕ ಕೃಷ್ಣನನ್ನು ಮೆಚ್ಚಿಸುವುದೆ ಈ ವೀರನಾರಾಯಣನ ಕಿಂಕರನ ಗುರಿ. ಕವಿಯ ಕಣ್ಣಲ್ಲಿ ಈ ಮಹಾಭಾರತವು 'ಪಂಚಮ ಶ್ರುತಿ'. ಪದುಮನಾಭನ ಮಹಿಮೆಯೆ ಗದುಗಿನ ಭಾರತದ ಹಿರಿಮೆ. ಈ ಭಾರತವನ್ನು ರಚಿಸಿರುವುದು ಕೃಷ್ಣ ಭಕ್ತಿಗಾಗಿ. ಅದು ಅವನಿಗೆ 'ಕೃಷ್ಣ ಕೃಪಾ ವಿಲಾಸ'.

---

* ೧೯೭೯, ಮಾರ್ಚ ೨೬ಕ್ಕೆ ತುಂಬೇಬೀಡಿನಲ್ಲಿ (ಯಲ್ಲಾಪುರ ತಾಲೂಕು) ಮಾಡಿದ ವಿಸ್ತರಣ ಉಪನ್ಯಾಸ.

ಆದರೆ ಈ ಪಂಚಮ ಶ್ರುತಿಯನ್ನು ಕನ್ನಡಿಸಿ ಹೇಳಿದಾಗ ಅದು ತುಳಸಿಯ ಉದಕದ ಮಹತ್ವವನ್ನು ಪಡೆಯುತ್ತದೆ. ತುಳಸಿಯ ಉದಕವೆಂದರೆ ತೀರ್ಥ. ಭಾವುಕರಿಗೇ ಗೊತ್ತು ತೀರ್ಥದ ಮಹಿಮೆ. ಕೃಷ್ಣ ಭಕ್ತಿಯ ಪಾರಮ್ಯವನ್ನು ಹೇಳ ಹೊರಟಿರುವ ಕವಿ ಬಹಳ ಮಾರ್ಮಿಕವಾಗಿ ಈ ಕೃಷ್ಣ ಕಥೆಯನ್ನು ತೀರ್ಥೋದಕಕ್ಕೆ ಹೋಲಿಸಿದ್ದಾನೆ. ತೀರ್ಥೋದಕವೆಂದರೆ ಬರಿ $H_2O$ ಅಲ್ಲ. ಅದರ ಹಿಂದೆ ಭಾವುಕತೆಯ ಮೌಲ್ಯವಿದೆ. ಅದನ್ನೆ ತೋರಿಸಬೇಕಾಗಿದೆ ಕವಿಗೆ, 'ಪದುಮನಾಭನ ಮಹಿಮೆ' ಯನ್ನು ಕೊಂಡಾಡಿ. ವಿದುರ, ದ್ರೌಪದಿ, ಭೀಷ್ಮ, ಪಾರ್ಥ, ಧರ್ಮ ಮೊದಲಾದವರೆಲ್ಲ ಶ್ರೀ ಕೃಷ್ಣನ ಪರಮ ಭಕ್ತರು. ಆದರೆ ಅವರ ಮುಖದಿಂದ ಶ್ರೀ ಕೃಷ್ಣನ ಮಹಾತ್ಮ್ಯೆಯನ್ನು ಮೆಚ್ಚಿ ಸ್ತುತಿಸುವವನು ಕವಿ ಕುಮಾರವ್ಯಾಸನೆ. ಇವರಷ್ಟೆ ಅಲ್ಲ ಧೃತರಾಷ್ಟ್ರ, ಕರ್ಣ, ದುರ್ಯೋಧನರು ಕೂಡ ಶ್ರೀಕೃಷ್ಣನ ಮಾಯೆ, ಮಹಿಮೆಗಳನ್ನು ಬಲ್ಲವರೆ ಆಗಿದ್ದಾರೆ. 'ಕೃಷ್ಣನ ಕೆಣಕಿದಲ್ಲದೆ ಪಹಿಲದಲಿ ಕೈವಲ್ಯವಿಲ್ಲ' ಎಂಬುದೂ ದುರ್ಯೋಧನನಿಗೆ ಗೊತ್ತು. ಸಂಧಿಗೆಂದು ಹಸ್ತಿನಾಪುರಕ್ಕೆ ಬಂದ ಕೃಷ್ಣ 'ಕಾಳಗವನೆ ಬಲಿದು ಬಹೆನು' ಎಂದು ತಂಗಿ ದ್ರೌಪದಿಗೆ ವಚನ ಕೊಟ್ಟು ಬಂದಿರುತ್ತಾನೆ. ದುರ್ಯೋಧನನಿಗೆ ಮಾತ್ರ ಕೃಷ್ಣನ ಈ ಒಳಗುಟ್ಟು ಗೊತ್ತು. 'ಸಂಧಿಯು ದೇವನಭಿಮತವಲ್ಲ' ಎಂದು ಸ್ಪಷ್ಟವಾಗಿ ಹೇಳುತ್ತಾನೆ.

ನಾವು ಸಂಧಿಯನೊಲ್ಲೆವೆಮ್ಮಯ
ಭಾವದಲಿ ಹುಳುಕಿಲ್ಲ, ಸಂಪ್ರತಿ
ದೇವನಭಿಮತವಲ್ಲ, ಬಲ್ಲೆನು ಮುರಹರನ ಬರವ
ನೀವು ಮೋಗರೆಯರಿತದವರೀ

ರಾವಣಾರಿಯು ಬಗೆಯ ಬಲ್ಲೆನು
ಸಾವನೀತನ ಕೈಯ ಬಾಯಲಿ ಭೀತಿ ಬೇಡೆಂದ ॥

ಹೀಗೆ ಸಖ್ಯ ಭಕ್ತಿಯಿಂದ ಕೃಷ್ಣನ ಮೆಚ್ಚಿಸಿ ಮುಕ್ತಿ ಪಡೆಯುವವರು ಕೆಲವರಾದರೆ, ಆತನ ವೈರ ಭಾವದಿಂದ ಕೃಷ್ಣನನ್ನು ಸೆಣಸಿ ಆತನ ಕೈಯಿಂದಲೆ ಸಾವನ್ನಪ್ಪಿ ಮುಕ್ತಿ ಪಡೆಯುವ ಭಕ್ತರೂ ಉಂಟು. ಆದರೆ ಕೃಷ್ಣನು ಮೆಚ್ಚುವುದು ತನ್ನನ್ನು ಅನನ್ಯ ಭಾವದಿಂದ ಮೊರೆ ಹೊಕ್ಕು ಶರಣಾಗತರಾದವರನ್ನು. ಅಂತಹ ಭಕ್ತರ ಬಂಟ ಈ ಭಗವಂತ.

## ೨. ಭಕ್ತ ಕುಟುಂಬಿಯಾದ ಕೃಷ್ಣ

ಒಲಿದವರನುಜ್ಜೀಸುವ ಬಗೆ
ಬಲುಹು ಮುರಮಥನಂಗೆ, ಮುನಿದೊಡೆ
ತಲೆಯಬರೆಹವ ತೊಡೆವನಲ್ಲದೆ ಬಳಿಕ ಸೈರಿಸನು
ನಳಿನನಾಭನು ಭಜಕರಿಗೆ ಚೆಂ
ಬಳಿಯ ಬಿರುದನು–

ಎಂಬ ಮಾತಿನಲ್ಲಿ ಕುಮಾರವ್ಯಾಸನು ಶ್ರೀ ಕೃಷ್ಣನು ಭಕ್ತಕೈವಾರಿ, ಭಕ್ತಿವಶನೆಂಬುದನ್ನು ಮಾರ್ಮಿಕವಾಗಿ ನುಡಿದಿದ್ದಾನೆ. ತನ್ನ ಭಕ್ತರಿಗೆ ಎಂತಹ ಸಂಕಷ್ಟಗಳು ಒದಗಿದರೂ ತಕ್ಷಣ ಅದಕ್ಕೆ ಪರಿಹಾರವನ್ನು ನೀಡಲು ಕೃಷ್ಣನು ಯಾವುದಕ್ಕೂ ಸಿದ್ಧ. ಅರ್ಜುನನ ವಚನ ಫಲಿಸುವುದಕ್ಕಾಗಿ, ಧರ್ಮಜನ ಸತ್ಯ ನಿಷ್ಠೆ ಚಲಿಸದಿರುವುದಕ್ಕಾಗಿ, ದ್ರೌಪದಿಯ ಜೀವಕ್ಕಿಂತ ಮಿಗಿಲಾದ ಆಕೆಯ ಮಾನವನ್ನು

ರಕ್ಷಿಸುವುದಕ್ಕಾಗಿ ಶ್ರೀ ಕೃಷ್ಣನು ಕೈಕೊಳ್ಳುವ ಒಂದೊಂದು ಹರಿಬವೂ ಚಮತ್ಕಾರಿಕವಾದದ್ದು. ಇಷ್ಟು ಪಟ್ಟು ಹಿಡಿದು ತನ್ನ ವರನ್ನು ಕಾಪಾಡಿ 'ಶರಣ ದೇಹಿಕ ದೇವ' ನೆನಿಸಿದ ದೇವನು ತನ್ನನ್ನು ಮುನಿವವರ ಹಣೆಬರೆಹವನ್ನೇ ತೊಡೆದು ಹಾಕಲು ಹಿಂದೆ ಮುಂದೆ ನೋಡುವುದಿಲ್ಲ. ಕರ್ಣ, ದುಶ್ಶಾಸನ, ದುರ್ಯೋಧನ, ಶಿಶುಪಾಲ, ಜರಾಸಂಧ, ಮೊದಲಾದ ದ್ವೇಷಿಗಳನ್ನು ಶಾಸನ ಮಾಡಲು ಕರುಣಿ ಕೃಷ್ಣನು ವಜ್ರಕಠೋರಿಯೆನಿಸುತ್ತಾನೆ.

ನಂಬಿದವರಿಗೆ ತನ್ನ ತೆತ್ತಿಹ  
ನೆಂಬ ಬಿರುದನು ಮೆರೆದು ಭಕ್ತಕು  
ಟುಂಬಿ ಸಾರಥಿಯಾದನೊಲಿದರ್ಜುನಗೆ ಮುರವೈರಿ ॥

ಪಾರ್ಥನಿಗೆ ತಾನು ಸಾರಥಿಯಾಗುವಲ್ಲಿ 'ಆಳು-ಒಡೆಯರೆಂಬ ಭೇದವ ಬೀಳುಕೊಟ್ಟೆ' ನಡೆದುಕೊಳ್ಳುತ್ತಾನೆ ವೀರನಾರಾಯಣ. ಈ ಮಹಾಮಹಿಮನನ್ನು ಕೊಂಡಾಡಲು ಹೋಗಿ ವೇದದ ಗಂಟಲು ಒಣಗಿ ಹೋಯಿತಂತೆ. ಹೀಗಿದ್ದೂ 'ಘನತೆಯ ಮೇಲೆ ತನ್ನದು ಘನತೆಯೆಂಬುದನತ್ತ ಬೇರಿರಿಸಿ' ತನ್ನ ಮೈದುನರನ್ನು ಮಮತೆಯಿಂದ ನಡಿಸುತ್ತಾನೆ– ಈ ಭಕ್ತಕುಟುಂಬಿ.

'ಕಾವ್ಯಕೆ ಗುರು' ಎನಿಸುವಂತೆ ಕುಮಾರವ್ಯಾಸನು ಈ ಭಾರತವನ್ನು ರಚ್ಚಿಸಿರುವುದು ಕೃಷ್ಣಭಕ್ತಿಯ ಪಾರಮ್ಯವನ್ನು ಕೊಂಡಾಡುವುದಕ್ಕಾಗಿ. 'ಕರ್ನಾಟೇ ವೃದ್ಧಿಂಗತಾ'ಎಂದು ಭಕ್ತಿಕನ್ಯೆ ತನ್ನ ಚರಿತ್ರೆಯನ್ನು ಹೇಳಿಕೊಳ್ಳುತ್ತಾಳೆ. ಪದ್ಮಪುರಾಣದಲ್ಲಿ. ಭಕ್ತಿರಸವನ್ನು ಪೋಷಿಸಿದ ಕನ್ನಡ ಭಾಗವತ ಕವಿಗಳಲ್ಲಿ 'ಶುಕರೂಪ' ನೆನಿಸಿದ ಕುಮಾರವ್ಯಾಸನು ಅಗ್ರಗಣ್ಯ. ಆತನ ಕೃತಿಯಲ್ಲಿ ಒಬ್ಬೊಬ್ಬ

ಭಕ್ತನೂ ತನ್ನ ತನ್ನ ವ್ಯಕ್ತಿತ್ವದೊಂದಿಗೆ ಒಂದೊಂದು ಪ್ರಕಾರದ ಭಕ್ತಿಗೆ ಮಾದರಿಯಾಗಿದ್ದಾನೆ.

'ವೀರನಾರಾಯಣನೆ ಕವಿ ಲಿಪಿಗಾರ ಕುವರವ್ಯಾಸ'ಎಂದು ಹೇಳುವಲ್ಲಿ ಈ ಭಕ್ತಿಕವಿ ತನ್ನ ನಿರಹಂಕಾರದೊಂದಿಗೆ ಸರ್ವ ಸಮರ್ಪಣಭಾವವನ್ನು ತೋರಿಸಿಕೊಂಡಿದ್ದಾನೆ. ವೀರನಾರಾಣನು ಬೇರೆ ಅಲ್ಲ, ಕೃಷ್ಣನು ಬೇರೆ ಅಲ್ಲ. ಭಕ್ತಿಯ ಸನ್ನಿವೇಶಗಳನ್ನು ಪರವಶತೆಯಿಂದ ಬಣ್ಣಿಸುವಾಗ ವೀರನಾರಾಯಣನ ಪ್ರೇರಣೆ ಯಿಂದ ಬಣ್ಣಿಸುತ್ತಿರುವಂತೆ ನಮಗನಿಸುತ್ತದೆ. ಅರಸುಗಳಿಗಿದು ವೀರವಾದರೂ ಕುಮಾರವ್ಯಾಸನಿಗೆ ಭಕ್ತಿ ರಸವು ಹೆಚ್ಚು ಪ್ರಿಯ ವಾದದ್ದು. ಅಂತೆಯೇ ಭಾರತದ ಕೃಷ್ಣನಿಗಿಂತ ಭಾಗವತ ಹರಿವಂಶ ಗಳ ಕೃಷ್ಣನು ಕುಮಾರವ್ಯಾಸನ ಕೃಷ್ಣ ಕಲ್ಪನೆಗೆ ಹೆಚ್ಚು ಅನುಕೂಲ ವೆನಿಸಿದ್ದಾನೆ. ಈ ದಿಕ್ಕಿನಿಂದ ನೋಡಿದಾಗ ಕವಿ ಹೃದಯದಲ್ಲಿ ಮಾತ್ರವಲ್ಲ ಕವಿ ನಿರ್ಮಿಸಿದ ಪಾತ್ರಗಳ ಹೃದಯದಲ್ಲಿಯೂ ಕೃಷ್ಣನೆ ಪ್ರೇರಕನಾಗಿದ್ದಾನೆ.

'ಎನ್ನ' ಹೃದಯದಲಿರ್ದು ಮುರಿವನು  
ಗನ್ನದಲಿ ಸಂಧಿಯಸು ರಿಪುಗಳೊ  
ಳಿನ್ನು ತನ್ನವರೊಳಗೆಯಿರ್ದು ನುಡಿವ ನೀ ಹದನ  
ಭಿನ್ನನಂತಿರೆ ತೋರಿ ಭಿನ್ನಾ  
ಭಿನ್ನನೆನಿಸಿಯೆ ಮೆರೆವ ತಿಳಿಯಲ  
ಭಿನ್ನನೈಮುರವೈರಿ ನಾನಿನ್ನಂಜಲೇಕೆಂದು' ॥

ಎಂದು ದುರ್ಯೋಧನನಿಗೂ ತನ್ನ ಹೃದಯಸ್ಥನಾಗಿ ಶ್ರೀಕೃಷ್ಣನೆ ಆಟವಾಡಿಸುವನೆಂದು ಗೊತ್ತು. ಕುಮಾರವ್ಯಾಸನ ಕೃಷ್ಣನಿಗೆ

ಎಲ್ಲ ಪಾತ್ರಗಳ ಮನಸ್ಸು ಅದರ ಪದರು ಪದರುಗಳು, ಅಲ್ಲಿಯ ಒಳನೋಟ ಎಲ್ಲವೂ ಗೊತ್ತು. ತಂತಮ್ಮ ಹೃದ್ರಂಗದಲ್ಲಿ ನಿಂತು ಕೊಂಡು ಆ ಕೃಷ್ಣಪರಮಾತ್ಮ ಪ್ರೇರಿಸುವಂತೆ ದ್ರೌಪದಿಯಿಂದ ದುರ್ಯೋಧನನವರೆಗೆ ಎಲ್ಲರೂ ತಂತಮ್ಮ ರೀತಿಯಲ್ಲಿ ಆಚರಿಸು ತ್ತಾರೆ. ಅಂತೆಯೆ ಕೊನೆಯಲ್ಲಿ ಕರ್ಣ, ಕೌರವಾದಿಗಳಿಗೂ ಕೃಷ್ಣ ನಿಂದಲೆ ಮುಕ್ತಿ. ಕೃಷ್ಣನಿಗೆ ಎಲ್ಲರಲ್ಲಿಯೂ ಕರುಣೆ. 'ಕೃಷ್ಣನ ಕರುಣೆ ಕಿರಿದಲ್ಲ.' ಸಂಸಾರಿಗರು ಪಡುವ ಕಷ್ಟ, ಸುರಿಸುವ ಕಂಬನಿಗಾಗಿ ಕೃಷ್ಣನಿಗೆ ಸಹಾನುಭೂತಿ ಇದೆ. ತನ್ನ ಮಕ್ಕಳ ಶವ ಗಳನ್ನು ಕಂಡು ಶೋಕಿಸುವ ಗಾಂಧಾರಿಗೆ ಸಾಂತ್ವನ ನೀಡುತ್ತಾನೆ. ಬ್ರಹ್ಮಾದಿಗಳಿಗೂ ಸುಖದುಃಖಗಳ ಸೋಂಕು ಇದ್ದದ್ದೆ ಎಂದು ಹೇಳಿ ಮಾನವ ವ್ಯಥೆಯ ಉತ್ಕಟತೆಯನ್ನು ಕಡಿಮೆ ಮಾಡುತ್ತಾನೆ, ಶ್ರೀ ಕೃಷ್ಣ.

## ೩. ಮಾನವ ನಾಟಕವನಾಡಿದ ಶ್ರೀಕೃಷ್ಣ

ಕುಮಾರವ್ಯಾಸನ ಕೃಷ್ಣನು ಮನುಷ್ಯ ನಾಟಕವನಾಡಲೆಂದೆ ದ್ರೌಪದಿ ಸ್ವಯಂವರ ಮಂಟಪದಲ್ಲಿ ಪ್ರವೇಶಮಾಡಿ ಕುರುಕ್ಷೇತ್ರ ದಲ್ಲಿ ಪಾರ್ಥನ ಸಾರಥಿಯಾಗಿ ತನ್ನ ಪಂಚಪ್ರಾಣಗಳಂತಿದ್ದ ಪಾಂಡವರನ್ನು ಗೆಲಿಸಿ ಧರ್ಮರಾಯನನ್ನು ಪಟ್ಟಗಟ್ಟುವವರೆಗೆ ತನ್ನ ಲೀಲಾವಿನೋದ ನಾಟಕವನ್ನಾಡುತ್ತಾನೆ.

ಈಸು ಮಹಿಮೆಯ ಮರೆಸಿ ಲೋಕವಿ
ಲಾಸ ಚೇಷ್ಟೆಯನನುಸರಿಸಿ ನರ

ವೇಷವನು ನಟಿಸಿದನು ಹರಿ ಹೊಳಿದ ನಿಜೋನ್ನತಿಯ ॥

ತಾನು ವಿಷ್ಣು ಅವತಾರಿ, ತಾನೇ ಜಗದುದರ, ತಾನೇ ಜಗತ್ ಪಾಲಕ, ತಾನೇ ಜಗತ್ ಸಂಹಾರ ಕರ್ತ ಎಂಬುದನ್ನು ಮರೆಸಿ ನರವೇಷ ಧರಿಸಿ. ನಿಜೋನ್ನತಿಯ ಹೊಳಿ ನಾಟಕವಾಡುತ್ತಾನೆ–ತಾನೆ ನಾಯಕ ಪಾತ್ರವಹಿಸಿ. 'ಪಂತ್ ಕೃತಿಗೆ ನಾಯಕ ಗದುಗಿನ ವೀರನಾರಯಣ' ಎನ್ನುತ್ತಾನೆ ಕವಿ.

ಭೀಷ್ಮನು ಮಾತ್ರ ಈ ಮಹಾವಿಷ್ಣುವಿನ ಮನುಷ್ಯ ವೇಷವನ್ನು ಓಸರಿಸಲು ಸಮರ್ಥ. 'ವಿಶ್ವನಾಟಕ ಸೂತ್ರಧಾರ, ವಿಶ್ವ ವಿಸ್ಮಯದೈಂದ್ರಜಾಲಿಕ, ವಿಶ್ವದಂತಸ್ಸೂತ ಚೇತನನೀತ'ನೆಂದು ಬಹಿರಂಗಪಡಿಸಬಲ್ಲ.

ಅಗ್ರ ಪೂಜೆಗೆ ಶ್ರೀಕೃಷ್ಣನೇ ಅರ್ಹನೆಂದು ಭೀಷ್ಮನು ಸಮರ್ಥಿಸುತ್ತ ಆತನ ಘನತೆ, ಮಾಹಾತ್ಮ್ಯಗಳನ್ನು ಬಣ್ಣಿಸುವಲ್ಲಿ, ಆತನೆ ಸೃಷ್ಟಿ, ಸ್ಥಿತಿ, ಲಯ ಕರ್ತನಾದ ಪರಮಾತ್ಮನೆಂದು ಸ್ಪಷ್ಟೋಕ್ತಿಯಲ್ಲಿ ಹೇಳುವನು.

ಈಶ್ವರಃ ಸರ್ವಭೂತನಾಂ ಹ ದ್ದೇಶೇಽರ್ಜುನತಿಷ್ಠತಿ
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ
ಮಾಯಯಾ ॥

ಎಂದು ಭಗವದ್ಗೀತೆಯಲ್ಲಿ ಹೇಳಿರುವಂತೆ ಜಗತ್ತಿನ ಜೀವರಾಶಿಯೆಲ್ಲವು ಈ ಸೂತ್ರಧಾರಿಯ ಕೈಯೊಳಗಿನ ಬೊಂಬೆಗಳಿದ್ದಂತೆ. ಪಟಕ್ಕೆ ಹಾರಾಡುವ ಸ್ವಾತಂತ್ರ್ಯವಿದ್ದರೂ ಸೂತ್ರಬದ್ಧವಾದ ಅದು

ಸೂತ್ರಧಾರನ ಕೈಯೊಳಗಿನವಸ್ತು. ಆದರಂತೆಯ ಜೀವಿಗಳ ಸ್ವಾತಂತ್ರ್ಯವು ಸೂತ್ರಧಾರಿಗೆ ಅಧೀನ.

ಶ್ರೀ ಏ. ಸೀ.ಯವರು 'ಕುಮಾರವ್ಯಾಸನ ಪ್ರಶಸ್ತಿ'ಯಲ್ಲಿ (ಪು. ೧೮೩) ಶ್ರೀ ಕೃಷ್ಣನ ಪಾತ್ರವನ್ನು ವಿಮರ್ಶಿಸುತ್ತ–ನಾರಣಪ್ಪನ ಭಾರತದ ಪ್ರಕಾರ ಭೂ ಭಾರವಿಳಿಸಲು ಜನ್ಮವೆತ್ತಿ ಖಿಳಮಂಡಲವನ್ನೆಲ್ಲಾ ಒರಸಿ ತನ್ನ ಕಾರ್ಯವನ್ನು ಮಾಡಿಕೊಂಡ ಭಕ್ತ ಬಂಧು ಮಹಾವಿಷ್ಣು. ಆತನೆ ಭಾರತಕ್ಕೆ ಸೂತ್ರಧಾರ; ಎಲ್ಲರ ಪ್ರವೃತ್ತಿಗಳಿಗೂ ಕಾರಣ: ಎಲ್ಲ ಪ್ರಯತ್ನಗಳ ಗುರಿ: ಎಲ್ಲ ಆಸೆಗಳ ನೆಲೆ. ಅವನಿಲ್ಲದೇ ಭಾರತವಿಲ್ಲ; ಎಂದು ನುಡಿದುದನ್ನು ಇಲ್ಲಿ ಈ ಸಂದರ್ಭದಲ್ಲಿ ನೆನೆಯಬಹುದಾಗಿದೆ,

ಹೂಹೆಗಳು ಹೊಯ್ದಾಡವೇ ನಿ
ರ್ವಾಹ ಸೂತ್ರದ ಕುಣಿಕೆಗಾರನ
ಗಾಹಿನಲಿ ತಜ್ಜಗದ ಜೀವದ ಸುಕೃತ ದುಷ್ಕೃತವ
ಓಹರಿಕೆಯಲಿ ತಂದು ಭವದಲಿ
ಸೋಹಿ ಸುಳಿಸುವನೀಚರಾಚರ
ಜೋಹವಿದು ನಿಜಲೀಲೆಯೀ ಹರಿಗೆಂದನಾ ಭೀಷ್ಮ ॥

ಜೀವರೆಲ್ಲ ಜನಾರ್ದನನ ಕೈಯೊಳಗಿನ ಸೂತ್ರಬೊಂಬೆಗಳು, ಅವರಿಗೆ ಸ್ವಾತಂತ್ರ್ಯವಿಲ್ಲ ಎಂಬ ಮಾತಿನ ಅರಿವು ದುರ್ಯೋಧನನಿಗೂ ಇದೆ.

ಹಳಚುವವು ಹಾಹೆಗಳು ಸೂತ್ರವ
ನಳುಗಿದೊಡೆ ತತ್ಪುಣ್ಯಪಾಪಾ
ವಳಿಗಳಾ ಹಾಹೆಗಳಿಗುಂಟೇ ಸೂತ್ರಧರನಿರಲು

ಕೊಲುವನನ್ಯರನನ್ಯರಿಂದವೆ
ಕೊಲಿಸುವನು ಕಮಲಾಕ್ಷನಲ್ಲದೆ
ಉಳಿದ ಜೀವವ್ರಾತಕೀ ಸ್ವಾತಂತ್ರ್ಯವಿಲ್ಲೆಂದ ॥
ಉದ್ಯೋಗ ಪರ್ವ–ಸಂಧಿ, ೯ ಪ. ೭೨)

'ಯಂತ್ರದ ಹಾಹೆ ಯಂತ್ರವನುಳಿದು ಜೀವಿಸಲಿರುವುದೆ ಬೇರೆ? ದೇಹಿ ನೀ ನಾವೆಲ್ಲ ನಿನ್ನಯ ದೇಹ' ಎಂದು ಮೊದಲಾಗಿ, ಶರಣ ದೇಹಿಕನಾದ ಕೃಷ್ಣನಿಗೆ ಇಂತಹ ಮಾತನ್ನು ಧರ್ಮರಾಯನು ಹೇಳುವುದು ಯಥಾಯೋಗ್ಯವೆನಿಸೀತು. ಆದರೆ ಜಾಣನಾದ ನಾರಣಪ್ಪನು ದುರ್ಯೋಧನನ ಬಾಯಿಂದಲೂ ಇದನ್ನೆ ಹೇಳಿಸಿ ದುರ್ಯೋಧನನ ಪಾತ್ರವನ್ನು ಒಂದಿಷ್ಟು ಎತ್ತರಿಸುತ್ತಾನೆ. ಕುಮಾರವ್ಯಾಸನ ಪಾತ್ರರಚನಾದೃಷ್ಟಿ, ವ್ಯಾಸ ಭಾರತವನ್ನೇ ಪುನಃ ಸೃಷ್ಟಿಸುವಂತೆ ಮಾಡಿದೆ. ಕುಮಾರವ್ಯಾಸನು ವ್ಯಾಸರ ಪ್ರತಿಕೃತಿಯಾಗಲಿಲ್ಲ; 'ಕೃಷ್ಣ ಕಥೆ'ಯಾಗಿ ವ್ಯಾಸ ಭಾರತದ ಹೊಸ ಎರಕ ಹೊಯ್ಯುವಂತೆ ಪ್ರೇರಿಸಿದ್ದಾನೆ, ವೀರನಾರಾಯಣ. ಆದರೆ ಕರ್ಣಾವಸಾನದ ಸಮಯಕ್ಕೆ ಅರ್ಜುನನು ಕೆಸರಿನಲ್ಲಿ ಹೂತ ರಥವುಳ್ಳ ಕರ್ಣನನ್ನು ಶ್ರೀ ಕೃಷ್ಣನು ಆದೇಶವಿತ್ತರೂ ವಧಿಸಲು ಒಲ್ಲದೆ ಅರ್ಜುನನು ಹಿಂತೆಗೆಯುತ್ತ ಮೋಹಾವಿಷ್ಟನಾಗಿ 'ಕೃಷ್ಣ ಕರ್ಣನಾರು ಪೇಳ್' ಎಂದು ಮಾತಿಗೊಮ್ಮೊಮ್ಮೆ ಪ್ರಶ್ನಿಸುತ್ತಿರುವುದು ರಾಜನೀತಿ ನಿಪುಣನಾದ ಕೃಷ್ಣನಿಗೆ ಅದು ತನ್ನ ಯಂತ್ರಾರೂಢ ಹಾಹೆಯು ಯಂತ್ರದಿಂದ ಸಿಡಿದು ಹೋದ ಹಾಗೆ ಸಿಡಿಮಿಡಿಗೊಳ್ಳುತ್ತಾನೆ ಪಾರ್ಥನ ಮೇಲೆ. ಕರ್ಣನ ಮೇಲೆ ಅಧರ್ಮಯುದ್ಧವನ್ನು ಮಾಡಲು ಪ್ರಚೋದಿಸುತ್ತ 'ಆಪತ್ತೆಸಗಿದಾಗಳೆ ಹಗೆಯ ಗೆಲುವುದು ವಸುಮತೀಶರ ನೀತಿ' ಎಂದು ಕೃಷ್ಣನು ಅನೀತಿಯನ್ನೆಸಗುತ್ತಿರುವುದೇಕೆ? ಎಂಬುದು ಪಾರ್ಥನಿಗೆ ಅರ್ಥವಾಗದು. ಆದರೆ

ನಿಜವಾಗಿಯೂ ಭಗವಂತನ ಸಂಕಲ್ಪವು ನರನ ಬುದ್ಧಿಗೆ ಅರ್ಥ ವಾಗದಂತಹದು. ಭೀಷ್ಮಸಂತಹರಿಗೂ ಇದೆಲ್ಲ ಪರಮಾತ್ಮನ ಯೋಜನೆ ಎಂಬುದು ಗೊತ್ತು. ಯೋಗೇಶನಾದ ಶ್ರೀಕೃಷ್ಣನು- 'ಕೊಂದು ಹಗೆಯಲ್ಲೀತ ಸಲಹಿದನೆಂದು ಮೋಹಿತನಲ್ಲ' ಎಂದು ಆತನ ಗುಣಗಾನ ಮಾಡುತ್ತಾನೆ :

ಸಂಗಿಯೆನಿಸನು ಜಗವ ಹುಟ್ಟಿಸಿ
ನುಂಗಿದೊಡೆ ನಿಷ್ಕರುಣಿಯೆನಿಸನು
ಅಂಗರಕ್ಷೆಯು ಮಾಡಿ ಮೋಹಿತನಲ್ಲ ಮೂಜಗಕೆ
ಜಂಗಮಸ್ಥಾವರಕೆ ಚೈತ
ನ್ಯಾಂಗ ರಕ್ಷನು ಘನಕೆ ಘನ ಅಣು
ವಿಂಗೆ ತಾನಣುವೆನಿಪ ಪರತರವಸ್ತು ನೋಡೀತ ॥
(ಉದ್ಯೋಗಪರ್ವ ಸಂಧಿ ೯, ಪದ್ಯ ೭೦)

ಕೃಷ್ಣನೆ ಪರಾತ್ಪರ ವಸ್ತು, ಕೃಷ್ಣನೇ ಪರಮಾತ್ಮ, ಕೃಷ್ಣನೆ ಸರ್ವ ಜೀವಚೇಷ್ಟಕ ಕೃಷ್ಣನೆ ಪುರುಷೋತ್ತಮನು.

## ದೇವನೂ ಹೌದು ಮಾನವನೂ ಹೌದು :

ಮಹಾವಿಷ್ಣುವು ಮನುಷ್ಯನವತಾರ ತಾಳಿ ಲೋಕ ರೂಢಿ ಯಂತೆ ನಡೆಯುತ್ತಿರುವ ರೀತಿಯನ್ನು ಕುಮಾರವ್ಯಾಸನು ಅದ್ಭುತ ವಾಗಿ ಚಿತ್ರಿಸುತ್ತಾನೆ. ಶ್ರೀಕೃಷ್ಣನು ದೇವನೂ ಹೌದು, ಮಾನ ವನೂ ಹೌದು. ದೇವನಲ್ಲಿ ಮಾನವೀಯತೆಯನ್ನು ರೂಪಿಸುವಲ್ಲಿ ಕುಮಾರವ್ಯಾಸನು ಅಸಾಮಾನ್ಯ ಪ್ರತಿಭೆಯನ್ನು ತೋರುತ್ತಾನೆ. ಕೃಷ್ಣನು ಮನುಷ್ಯ ನಾಟಕವನ್ನಾಡುವಲ್ಲೆಲ್ಲ ಕವಿ ಆತನ ಭಗವತ್ ಸ್ವರೂಪವನ್ನು ನೆನೆದು ಕೌತುಕ ಭಾವವನ್ನು ವ್ಯಕ್ತಪಡಿಸುತ್ತಾನೆ.

'ಮಮ ಪ್ರಾಣಾಹಿ ಪಾಂಡವಾಃ' ಎಂದು ಬಗೆದ ಶ್ರೀ ಕೃಷ್ಣನು ಪಾಂಡವರ ಜೊತೆಗೆ ಭಾವ-ಮೈದುನ ಭಾವದಿಂದ ನಡೆದುಕೊಳ್ಳುತ್ತಿದ್ದನು. ಅವರು ವನವಾಸವನ್ನನುಭವಿಸುತ್ತಿರು ವಾಗಲಂತೂ ಪದೇ ಪದೇ ಅವರ ಕ್ಷೇಮ ಚಿಂತನೆಯನ್ನು ಮಾಡು ತ್ತಿದ್ದ. ಅವರಿಗೆ ಏನಿತೊಂದಾದರೂ ಆಪತ್ತೊದಗಿದರೆ ಅವರು ಧ್ಯಾನಿಸಿದ ಮಾತ್ರಕ್ಕೇ ಶ್ರೀಕೃಷ್ಣನು ಅವರ ತಾಪತ್ರಯ ಪರಿ ಹಾರಕ್ಕೆ ಅಲ್ಲಿಗೆ ಸನ್ನಿಹಿತನಾಗುತ್ತಾನೆ.

ಶ್ರೀ ಲತಾಂಗಿಯ ರಮಣನು ಅನಿಬರೊಳು ಆಳು-ಒಡೆಯ ಎಂಬ ಭೇದವನ್ನು ಬಿಟ್ಟುಕೊಟ್ಟು ಸರಿಸಮಾನ ಭಾವನೆಯಿಂದ ಹೇಗೆ ನಡೆದುಕೊಳ್ಳುತ್ತಿದ್ದನೆಂಬುದನ್ನು ಚಿತ್ರಿಸುವಲ್ಲಿ ದೇವಮಾನವ ಕೃಷ್ಣನ ಪಾತ್ರ ರಚನೆಯ ಒಂದು ಅಪೂರ್ವ ಆಯಾಮವನ್ನೆ ರಚಿಸುತ್ತಾನೆ; ಹೊಸದೊಂದು ಬಗೆಯನ್ನು ಕಾಣಿಸುತ್ತಾನೆ. ಈತನ ಮಹಿಮೆಯನ್ನು ಹಾಡಿ ಹೊಗಳಲು ಹೋಗಿ ವೇದಗಳು ಬಾಯಿ ಒಣಗಿಸಿಕೊಂಡುವಂತೆ! ಅಂತಹ ಮಹಾನುಭಾವನಾದ ಶ್ರೀಕೃಷ್ಣನು ವಯಸ್ಸಿನಲ್ಲಿ ತನಗಿಂತ ಹಿರಿಯರೆಂದು-

ಕಾಲಿಗೆರಗುವನಾ ಯುಧಿಷ್ಠಿರ
ನೇಳತೊಡಗೇಳುವನು ಕೃಷ್ಣನ
ಲೀಲೆಯನುಪಮವೆಂದು ವೈಶಂಪಾಯಮುನಿ ನುಡಿದ॥
(ಉ. ೧ ನೆಯ ಸಂ. ಪ. ೨)

ವಿದುರನ ಮನೆಗೆ ಬಂದಾಗಲೂ ಅಷ್ಟೆ, ಅಲ್ಲಿ ಆಸರೆ ಪಡೆಯುತ್ತಿದ್ದ ಕುಂತೀದೇವಿಯನ್ನು ಕಂಡು ತನ್ನ ಸೋದರತ್ತೆ

ಯೆಂಬ ವಿನಯ ಗೌರವಗಳಿಂದ ನಮಸ್ಕರಿಸುತ್ತಾನೆ. ಆ ಸಮಯಕ್ಕೆ ತಾನು ಪರಮಾತ್ಮನೆಂಬ ಭಾವ ಶ್ರೀಕೃಷ್ಣನ ಮನಸ್ಸಿನಲ್ಲಿ ಬರಲಿಲ್ಲವಂತೆ. ಕುಂತಿಯು—

ಬರಲು ಕಂಡಸುರಾರಿ ಮುಂಚದೊ
ಳಿರದೆ ಧಿಮ್ಮನೆ ನಿಂದು ನರರಾ
ಚರಣೆಗಳ ನಾಟಕವ ತಾನೇ ನಟಿಸಿ ತೋರಿದನು
ಹಿರಿಯರಿಗೆ ತಾ ಹಿರಿಯನೆಂಬೀ
ಗರುವತನವನು ಬಿಸುಟು ಕುಂತಿಗೆ
ಕರವಮುಗಿದೆರಗಿದನು ಮುನಿಜನನಿಕರ ಘೇಯೆನಲು ॥
(ಉ. ೮ನೆಯ ಸಂ. ಪ. ೧೭)

ವಿದುರನು ಭಗವಂತನ ದರ್ಶನದಿಂದ ಹರ್ಷಾರಣ್ಯದಲ್ಲಿ ಮನ ಹೊಲಬುದಪ್ಪಿದಾಗ 'ಹಸಿದು ನಾವೈತಂದರೀ ಪರಿ ಮಸಗಿ ಕುಣಿದಾಡಿದೊಡೆ, ಮೋಹ್ ಈ ವಸತಿಯನು ಸುಗಿದೆತ್ತಿ ಬಿಸುಟರೆ ತನಗೆ ತಣಿವಹುದೆ ?' ಎಂದು ನಗೆ ನುಡಿಯಾಡಿ ತನ್ನ ದೇವತ್ವವನ್ನು ಮರೆಮಾಡಿ ಮನುಷ್ಯ ಪಾತ್ರಧಾರಣೆಯ ಅಂಶವನ್ನ ಎತ್ತಿ ತೋರುತ್ತಾನೆ. ಅರ್ಜುನನೊಡನೆ ಕೂಡ ಹಾಗೆಯೆ. ಯುದ್ಧ ಸಂವರಣೆಗಾಗಿ ದುರ್ಯೋಧನನು ಕೃಷ್ಣನನ್ನೂ ಬಿಟ್ಟು ಉಳಿದೆಲ್ಲ ಬಲವನ್ನು ಆರಿಸಿಕೊಂಡು ಉತ್ಸಾಹಿಸಿದಾಗ, ತನಗೇ ಮೊದಲನೆಯ ಆಯ್ಕೆಯನ್ನು ಕೊಡಮಾಡಿದಾಗಲೂ ಪಾರ್ಥನು ಪಾರ್ಥಸಾರಥಿತ್ವವನ್ನೇ ಆಯ್ದುಕೊಂಡು ತನಗೆ ಭಗವಂತನ ಬಲವಿದೆಯೆಂದು ಭಕ್ತಿ ಅಭಿಮಾನಗಳನ್ನು ತೋರ್ಪಡಿಸಿದಾಗ 'ದೇವರೆಂದೇ ನೀವು ಬಗೆವಿರಿ, ದೇವತನವೆಮ್ಮೊಳಗಿಲ್ಲವೆಂಬುದ ನಾವು ಬಲ್ಲೆವು'

ಎಂದು ಮತ್ತೆ ಅದೇ ಬಗೆಯ ನಗೆಯಾಡಿ ತನ್ನ ದೇವತ್ವವನ್ನು ಅಡಗಿಸಲು ಯತ್ನಿಸುತ್ತಾನೆ. ಆದರೆ ಪಾರ್ಥನಿಗೇನು ಅರಿಯದ್ದೆ ಮುರಾರಿಯ ಈ ನಾಟಕ ? 'ನಿಮ್ಮ ಗರುಡಿಯೊಳೆಮಗೆ ಶ್ರಮ ವುಂಟು' ಎಂದು ಅದೇ ಧಾಟಿಯಲ್ಲಿ ಉತ್ತರಿಸುತ್ತ 'ನೀವು ದೇವ ಮಾತ್ರವೆ ? ದೇವರ ದೇವರು' ಎಂದು ಮುಂಗಾಲ್ ಪುಟಿಗೆಯ ಮಾತನಾಡಿದಾಗ ಭಗವಂತನಿಗೂ ಸ್ವಲ್ಪ ಮುಜುಗರವೆನಿಸಿರಬೇಕು. ಭಕ್ತ–ಭಗವಂತನ ಸಂಬಂಧದಲ್ಲಿಯೂ ಮನುಷ್ಯ ಜೀವನ ಸ್ವಭಾವ ವನ್ನೂ ಕುಮಾರವ್ಯಾಸ ಮರೆಯುವದಿಲ್ಲ.

## ೪. ಕೃಷ್ಣನ ಪೌರಾಣಿಕ ಮಾಹಾತ್ಮ್ಯ

ಶ್ರೀಕೃಷ್ಣನ ಮನುಷ್ಯಾವತಾರದ ನಾಟಕವನ್ನು ಆಡಿಸಿಯೂ ಆತನ ಪೌರಾಣಿಕ ಮಾಹಾತ್ಮ್ಯೆಯನ್ನೂ ಪವಾಡಗಳ ಮೂಲಕ ಪ್ರಕಟಿಸುವ ಕವಿಯ ಕೌಶಲ ಅದ್ಭುತವಾದುದು. ದುರ್ಯೋಧನನ ದುಷ್ಪ್ರೇರಣೆಯ ಮೇರೆಗೆ ದೂರ್ವಾಸರು ಪಾಂಡವರ ಆತಿಥ್ಯ ಬಯಸಿ ದ್ರೌಪದಿಯ ಅಕ್ಷಯಪಾತ್ರೆ ಕ್ಷಯವಾಗುವಂತೆ ಭಂಗ ಪಡಿಸಲು ಬಂದಾಗ ಆಕೆ ತನ್ನ ಸತ್ವಪರೀಕ್ಷೆಯ ಸಮಯ ವೆಂಬಂತೆ ಶ್ರೀಕೃಷ್ಣನಲ್ಲಿ ಭಕ್ತಿಯಿಂದ ಮೊರೆ ಹೋಗುತ್ತಾಳೆ. ಆಗ ಆವಳ ಧ್ಯಾನ ಭಕ್ತಿಗಳಿಗೆ ಕರಗಿ ಪ್ರತ್ಯಕ್ಷನಾಗುತ್ತಾನೆ ಶ್ರೀಕೃಷ್ಣ.

ಧ್ಯಾನ ಗೋಚರನಾಗಿ ವನಿತೆಯ
ಮಾನಸದಲಿಹ ಪರಮಹಂಸನು
ಮಾನುಷಾಕೃತಿಯಾಗಿ ತೋರಿದ ಬಾಹ್ಯರಚನೆಯಲಿ ॥

ಹೀಗೆ ರೂಪಧರಿಸಿ ಎದುರಿಗೆ ಬಂದು ನಿಂತ ಭಗವಂತನ ದರ್ಶನ ಪಡೆದ ಭಕ್ತೆ ದ್ರೌಪದಿ ಆತನ ಚರಣಕೆ ಹಣೆಯ ಚಾಚುತ್ತ—

ಧರಣಿಯನು ಬಿಡದಳೆದು ಹೆಚ್ಚಿದ
ಚರಣವಿದು, ಸುರನದಿಯ ಸೃಜಿಸಿದ
ಚರಣವಿದು, ಕಲ್ಲಾದಹಲ್ಯಾ ಶಾಪನಿರುಹರಣ
ಚರಣವಿದು ಶಕಟ ಪ್ರಭಂಜನ
ಚರಣವಿದೆಲಾಯೆನುತ ಕೊಂಡಾಡಿದಳು ಹರಿಪದವ ॥

ಕೃಷ್ಣನಿಗೆ ಈ ಸ್ತೋತ್ರ, ಈ ಪ್ರಶಂಸೆ ಬೇಡವಾಗಿದೆ. ತಾನೊಬ್ಬ ಕೇವಲ ಮಾನವಪುರುಷ ಎಂಬ ಕಲ್ಪನೆಯನ್ನು ಕೊಡುವುದಕ್ಕಾಗಿ-

ಸ್ತೋತ್ರಕೀಗಳು ಸಮಯವೇ ಹೇ
ಳೇತಕೀ ಸ್ತುತಿ ತಂಗಿ, ಚಿತ್ತದೊ
ಳಾತುರವಿದೇನೆನುತ ಹಿಡಿದೆತ್ತಿದನು ಮಸ್ತಕವ॥

ಆಗ ಉದ್ಭವಿಸಿದ ಪರೀಕ್ಷಾ ಪ್ರಸಂಗವನ್ನು ಅಣ್ಣನಿಗೆ ಅರುಹುತ್ತಾಳೆ ದ್ರೌಪದಿ. ಅಕ್ಷಯದನ್ನ ತೀರಿ ಹೋಗಿದೆ. 'ಮಹಾಋಷಿಯ ಘನರೋಷ–ವಹ್ನಿಗುಪಾರ ನಿನ್ನಯ ಮೈದುನನ ತನು' ಎಂದು ದ್ರೌಪದಿ ಅರಿಕೆ ಮಾಡಿಕೊಂಡರೆ ಈ ಅಣ್ಣನ ಉತ್ತರ ಹೀಗೆ :

ನಾವು ಹಸಿದೈತಂದರೀ ಪರಿ.
ದೇವಿ ನಾನಾದೂರ ದೂರುವು
ದಾವುದುಚಿತವು ಹೇಳು…

ದ್ರೌಪದಿಗೆ ಗೊತ್ತು, ಈ ಮಾನುಷವೇಷಿ ಅಣ್ಣನ ಮಾತಿನ ರಹಸ್ಯ ಹೇಳುತ್ತಾಳೆ :

ದೇವ ನಿಮ್ಮಯ ಹಸಿವು ಕಳೆವೊಡೆ
ಭಾವಶುದ್ಧಿಯ ಭಕುತಿ ಬೇಹುದು
ನಾವು ಚಂಚಲ ಚಿತ್ತರು...

ಎಂದು. ಇಲ್ಲಿ ದ್ರೌಪದಿ ಅಣ್ಣನೆಂಬ ಕೃಷ್ಣನು ದೇವನೆಂಬ ಪ್ರತ್ಯಯ ದಿಂದಲೆ ಆತನನ್ನು ಸಂಬೋಧಿಸುತ್ತ ಅಣ್ಣತಂಗಿಯ ಸಂಬಂಧ ವನ್ನು ಭಗವಂತ ಭಕ್ತನ ಸಂಬಂಧಕ್ಕೆ ತಿರುಗಿಸಿ ಮಾತನಾಡುತ್ತಾಳೆ. ಈ ತಂಗಿ ಭಕ್ತೆಯಾದರೂ ಸಾಮಾನ್ಯ ಸ್ತ್ರೀಯಂತೆ ತಾನೂ ಚಂಚಲ ಚಿತ್ತಳು ಎಂದು ನುಡಿಯುತ್ತಾಳೆ. ಈ ಅಣ್ಣ ತಂಗಿಯ ಸಂವಾದ ದಲ್ಲಿ ಜಾಣನಾದ ಕವಿ ಭಕ್ತ-ಭಗವಂತನ ಮಧುರ ಸಂಬಂಧವನ್ನು ಕಂಡು ಮಧುರವಾಗಿ ಬಣ್ಣಿಸುತ್ತಾನೆ. ಹೀಗೆ ದ್ರೌಪದಿಯ ಭಕ್ತಿಗೆ, ವಿದುರನ ಭಕ್ತಿಗೆ, ಅರ್ಜುನನ ಭಕ್ತಿಗೆ ಸಂತುಷ್ಟನಾದ ಪರಮಾತ್ಮನು ತನ್ನ ದೈವೀಮಾಹಾತ್ಮ್ಯೆಯನ್ನು ಮರೆಮಾಡಿ ಮನುಷ್ಯ ಸೂತ್ರದ ಸ್ವರೂಪವನ್ನು ತೋರಿ ತನ್ನ ನಾಟಕವನ್ನಾಡು ತ್ತಾನೆ. ಕಾವ್ಯದಲ್ಲಿ ಕವಿಯ ದೈವೀ ಶ್ರದ್ಧೆ, ಜೀವನ ಶ್ರದ್ಧೆ ಎರಡೂ ಹೊಂದಿಕೊಂಡು ಹೊರಹೊಮ್ಮಿರುವುದು ಕವಿಯ ಘನತೆಯನ್ನು ತೋರಿಸುತ್ತದೆ. ದೇವರಿಗೆ ಮನುಷ್ಯ ವೇಷ ತೊಡಿಸಿ ಅದೇ ಕಾಲಕ್ಕೆ ಆತನ ದೇವತ್ವವನ್ನು ಎತ್ತಿತೋರುವ ಅದ್ಭುತ ಜಾಣ್ಮೆ ನಾರಣಪ್ಪನದು. ಶ್ರೀಕೃಷ್ಣನಿಗೆ ತನ್ನ ಭಕ್ತರ ಸಂಕಟವನ್ನು ನಿವಾರಿಸುವುದೆ ಆತನ ಕೆಲಸ. ಆದರೆ ಹೀಗೆ ನಿವಾರಿಸುವಲ್ಲಿ ಭಕ್ತ ರೊಡನೆ ಭಗವಂತನಿಗೆ ಒಂದಿಷ್ಟು ಸರಸ, ಹಾಸ್ಯವೆಸಗುವ ಚಪಲ. ಇದು ಕುಮಾರವ್ಯಾಸನ ವೈಶಿಷ್ಟ್ಯ.

'ಭಂಟರಾಂ ಭಕ್ತರ್ಗೆ' ಎಂದು ಎದೆತಟ್ಟಿ ಹೇಳುತ್ತಾನೆ ಕುಮಾರವ್ಯಾಸನ ಕೃಷ್ಣ. ಆ ಭಕ್ತರು 'ಒಂದು ನುಡಿ ಹೊಗಳಿದರೆ ಎಂಟು ಮಡಿ' ಮೆಚ್ಚುತ್ತಾನೆ. ಅಷ್ಟೇ ಏಕೆ ಭಕ್ತರ ಮನೆಯಲ್ಲಿ ಮುಸುರೆಯನ್ನು ತೊಳೆಯಲೂ ಸಿದ್ಧ. ಭಕ್ತನ ಬಂಡಿಯ ಜೀವನಾಗಲೂ ಸಿದ್ಧ. ತನ್ನ ಭಕ್ತರ ಅಹಿತರು ತನಗೂ ಅಹಿತರೆ. ಅಂತೆಯೇ ಕೌರವನ ಮುಂದೆ ಹೇಳುತ್ತಾನೆ– 'ಎಮಗೆ ಸರಿ ಇತ್ತಂಡದಲ್ಲಿಯು ಮಮತೆ. ಬೇರೊಬ್ಬರಲಿ ಪಕ್ಷ ಭ್ರಮೆಯ ಮಾಡೆವು' ಎಂದು. ಆದರೆ ಮೊದಲೇ 'ಕಾಮಿನಿಗೆ ಕರಗುವ ಕೃಷ್ಣ' ಪರಮ ಭಕ್ತೆಯಾದ ದ್ರೌಪದಿಯ ಸಂಕಷ್ಟಗಳಿಗೆ ಮಮ್ಮಲಮರುಗಿ ಕರಗಿಹೋಗುತ್ತಾನೆ :

ಕಮಲಮುಖಿ ಸುಲಿಪಡೆದು ಲಕ್ಷ್ಮೀ
ರಮಣ, ಲಕ್ಷ್ಮೀರಮಣ, ಲಕ್ಷ್ಮೀ
ರಮಣ ಎಂದೊರಲಿದೊಡೆ ಸಂಜಯನೊಂದೆನಾನೆಂದ॥

ಆದಕ್ಕಾಗಿಯೇ—

ಉಂಟು ಪಾಂಡವರೈವರಲಿ ಬಲು
ನಂಟತನ ಮರೆಯೇಕೆ, ಐವರು
ಕಂಟಕರು ನಮಗಾದ ಕಂಟಕರೆಂದು ಹರಿನುಡಿದ ॥

ತಾನು ಭಕ್ತ ಪರಿಪಾಲಕನೆಂದ ಮೇಲೆ ಭಕ್ತನಲ್ಲದ ಕೌರವನು ಕಂಟಕನೆಂದು ನೇರವಾಗಿ ಎಂಟೆದೆಯಿಂದ ಹೇಳುವಲ್ಲಿ ತಪ್ಪೇನು ? ಇದು ಕೌರವನಿಗೂ ಗೊತ್ತು. ಆತನೂ ಸ್ಪಷ್ಟವಾಗಿಯೆ ಹೇಳು ತ್ತಾನೆ.

'ಮರೆಯ ಮಾತುಗಳೇಕೆ ಪಾಂಡವ
ರೆರಕ ನಿಮ್ಮಲಿ ಹಿರಿದು, ಪಾರ್ಥಗೆ
ಮರುಗುವಿರಿ ಹಿರಿದಾಗಿ ಮನಮೆಚ್ಚುಂಟು ನಿಮ್ಮೊಳಗೆ
ಉರುವ ಕಾರ್ಯಕೆ ಕಡೆಯಲಾವೇ
ಹೊರಗು, ಸಾಕಂತಿರಲಿ, ನೀ ಹೊ
ಕ್ಕಿರಿಯಲಾಗದು ಕೃಷ್ಣ'—ಎಂದನು ಕೌರವರ ರಾಯ ॥

ಕೃಷ್ಣನು ಕಪಟ ಕಾರಸ್ಥಾನಿ ಎಂದೂ ಸೂಚ್ಯವಾಗಿ ಅವನನ್ನು ಜರೆಯುತ್ತಾನೆ. ಕೃಷ್ಣನ ಸ್ವಭಾವವನ್ನು ಸಂಪೂರ್ಣ ಬಲ್ಲವನಾಗಿದ್ದ ದುರ್ಯೋಧನ, ಆದರೂ ಕಾದಾಡಬೇಕೆಂಬ ಛಲ. ಕೃಷ್ಣನ ವೈರಿಗೂ ಕೃಷ್ಣನ ಘನತೆಯ ಪ್ರಜ್ಞೆ ಇದೆ ಎಂದು ತೋರಿಸುವುದು ಕುಮಾರವ್ಯಾಸನ ಅಪೂರ್ವತೆ.

ಪಂಚಪತಿಗಳ ಗೃಹಿಣಿಯಾಗಿ ದ್ರೌಪದಿ ಬಾಳಿನಲ್ಲಿ ನಡೆದ ಅವಹೇಳನಗಳನ್ನೂ ಕಷ್ಟಪರಂಪರೆಗಳನ್ನೂ ತೀವ್ರವಾಗಿ ಅನುಭವಿಸುತ್ತಾಳೆ. ಅಣ್ಣನು ದೇವರಾದರೂ ತಂಗಿಗೆ ಜೀವನದಲ್ಲಿ ದುಃಖ ತಪ್ಪದು. ದ್ರೌಪದಿಯೂ ಅದನ್ನು ಎದುರಿಸಿಯೇ ತೀರುತ್ತಾಳೆ. ಕೊನೆಯ ಗಳಿಗೆಯಲ್ಲಿ ಕೃಷ್ಣನಿಗೆ ಮೊರೆಹೋಗುತ್ತಾಳೆ. ತನ್ನ ಮಾನಹಾನಿಯ ಹರಿಬವನ್ನು ಕೃಷ್ಣ ಅಣ್ಣನಾಗಿ ಅಲ್ಲ, ಒಬ್ಬ ಭಕ್ತೆಯ ರಕ್ಷಕನಾಗಿ ಹೊತ್ತುಕೊಳ್ಳಬೇಕಾಗುತ್ತದೆ. ವಸ್ತ್ರಕರುಷಣದ ಪ್ರಸಂಗದಿಂದ ಪಾರುಮಾಡಬೇಕೆಂದು ಶ್ರೀಕೃಷ್ಣನಲ್ಲಿ ಮೊರೆಯಿಟ್ಟು ಪ್ರಾರ್ಥಿಸುವಾಗ—

'ಚರಣಭಜಕರ ಮಾನಹಾನಿಯು
ಪರಿಭವಾರದು ಕೃಷ್ಣ ? ನಾವು
ಸ್ಮರಣ ಧನಿಕರಿಗುಂಟೆ ಘಲ್ಲಣೆ ಘೋರಪಾತಕದ ?
ಪರಮ ಭಕ್ತ ಕುಟುಂಬಕನು ನೀ
ಕರುಣೆಯಲ್ಲದೊಡೀ ಕುಟುಂಬಕೆ
ಶರಣರಾರೈ ಕೃಷ್ಣ ಸಲಹೆಂ'ದೊರಲಿದಳು ತರಳೆ ॥

ಮಹಾಭಾರತದ ತುಂಬೆಲ್ಲ ದ್ರೌಪದಿಯ ಕಂಬನಿಯೋ ಕಂಬನಿ. ಆಕೆ ಕಂಬನಿ ಸುರಿಸಿದಾಗೆಲ್ಲ ಶ್ರೀಕೃಷ್ಣನೇ ಆ ಕಂಬನಿ ತೊಡೆಯ ಬೇಕು. ದ್ರೌಪದಿಯ ಪರಿಭ ಕೃಷ್ಣನದು. ಆವಳ ಪರಿಭವದ ಆಗು ಹೋಗು ಆವನ ತಲೆಯ ಮೇಲೆ. ವಸ್ತ್ರಾಪಹರಣದ ಕಾಲಕ್ಕೆ ದ್ರೌಪದಿ ಶ್ರೀಕೃಷ್ಣನನ್ನು ನೆನೆದ ಆರ್ತತೆ ಕಲ್ಲೆದೆಗಳನ್ನೂ ಕಲ್ಲು ಸಕ್ಕರೆಯಂತೆ ಕರಗಿಸುವಂತಹದು.

ಶ್ರೀಕೃಷ್ಣನು ಸಂಧಿಗೆಂದು ಹೊರಟಾಗ ಧರ್ಮರಾಯ ಮೊದಲಾಗಿ ನಕುಲನವರೆಗೆ ನಾಲ್ವರೂ ಪಾಂಡವರು ಸಂಧಿಯನ್ನೇ ಸಾಧಿಸುವುದೆಂದು ಕೃಷ್ಣನಲ್ಲಿ ಆರಿಕೆ ಮಾಡಿಕೊಳ್ಳುತ್ತಾರೆ. ದ್ರೌಪದಿಗೆ ಮಾತ್ರ ಇದು ಒಪ್ಪಿಗೆ ಇಲ್ಲ. ಸಹದೇವನೂ ದ್ರೌಪದಿಯ ಅಭಿಪ್ರಾಯದವನೆ. ತನ್ನ ನಾಲ್ವರು ಪತಿಗಳು ಬಿಡಲಿ ತಾನೊಬ್ಬಳೆ ಸಹದೇವ, ಘಟೋತ್ಕಚ, ದ್ರುಪದ ಸೇನೆಯೊಂದಿಗೆ ಯುದ್ಧಕ್ಕೆ ಸನ್ನದ್ಧಳಾಗುವುದಾಗಿ ನುಡಿದಾಗ ಕೃಷ್ಣನ ಅಂತಃ ಸಂಕಲ್ಪವನ್ನೆ ಆವಳು ಪ್ರತಿಧ್ವನಿಸಿದಂತಾಯಿತು. ಈಗ ಮಾತ್ರ ಕೃಷ್ಣನು ಚರಣಭಜಕಳ ಮಾನಹಾನಿಯ ಹರಿಬವನ್ನು ಹೊತ್ತು ಆವಳ ಸಹಾಯಕ್ಕೆ ಬರುವುದನ್ನು ಬಹಿರಂಗವಾಗಿ ಆದರೂ ರಹಸ್ಯ

ವಾಗಿ ದ್ರೌಪದಿಯ ಮುಂದೆ ಒಡನುಡಿಯಬೇಕಾಯಿತು. ತನ್ನ ಮುಂದೆ ಕಿಡಿಗಂಬನಿಗಳನ್ನು ತಳೆದು ನಿಂತ ತಂಗಿಗೆ 'ಕಾಳೆಗವನೆ ಬಲಿದು ಬಹೆನು' ಎಂದು ಆಶ್ವಾಸನೆ ನೀಡುತ್ತಾನೆ. ಇದಕ್ಕೇನಾದರೂ ಧರ್ಮಜಾದಿಗಳು ಹೆಚ್ಚು ಕಡಿಮೆಮಾಡಿದರೆ ತಾನು ಸ್ವತಃ 'ರಿಪುಗಳ ಸೀಳಿ ಕರುಳನು' ಆಕೆಯ ಕಬರಿಯಲಿ ಮುಡಿಸುವುದಾಗಿ ಮಾತು ಕೊಡುತ್ತಾನೆ:

ದೇವಕಿಯ ಮೇಲಾಣೆ ವರ ವಸು
ದೇವನಂಘ್ರಿಗಳಾಣೆ ಮನುಮಥ
ದೇವನಾಣೆ ನಿಧಾನವನು ಕೇಳಬಲೆ ನಿನ್ನಾಣೆ
ನಾವು ಸಂಧಿಯ ನೆವದಲವದಿರ
ಭಾವವನು ಕಲಿಮಾಡಿ ಕೋಪವ
ತೀವಿ ಸಂಧಿಯ ಮುರಿದು ಬಹೆವಿದನಂಬು ನೀನೆಂದ ॥

ಅಣ್ಣ ಶ್ರೀಕೃಷ್ಣನಿಂದ ಕೌರವ ಸಂಹಾರಕ್ಕೆ ಅಭಿವಚನ ದೊರೆತಾಗ ದ್ರೌಪದಿ ಹರುಷವುಕ್ಕಿ ಹಿಗ್ಗಿದಳು. ಶ್ರೀಕೃಷ್ಣನ ಪೂರ್ಣ ಅನುಗ್ರಹವಿದ್ದಾಗಲೂ ಆಕೆ ತನ್ನ ರಾಗ-ದ್ವೇಷಗಳಿಂದ ತನ್ನ ವ್ಯಕ್ತಿತ್ವವನ್ನೂ ಸ್ವಾತಂತ್ರ್ಯವನ್ನೂ ತೋರುತ್ತಾಳೆ.

ಶ್ರೀಕೃಷ್ಣನು ಭಾರತ ಯುದ್ಧದ ಮುಖ್ಯ ಸೂತ್ರಧಾರಿಯಾದರೆ ಈ ಕೃಷ್ಣೆ ಅದರ ಕೀಲ. ಕುರುಕ್ಷೇತ್ರದ ಯುದ್ಧಾಗ್ನಿಗೆ ಗಾಳಿ ಹಾಕಿದುದು ಅಗ್ನಿಜಾತೆಯ ಸೆರಗು. ಅದರೊಂದಿಗೆ ದಾಯಾದಿ ಮತ್ಸರ, ದ್ರೌಪತಿಯ ಚೆಲುವಿಕೆ, ಅವಳ ಆ ನಗೆ (ಮಯ ನಿರ್ಮಿತ ಸಭಾಗೃಹದಲ್ಲಿ ಕೌರವನು ಅವಮಾನಿತನಾದಾಗ). ಇವೆಲ್ಲ ಕಾಳಗದ ಉರುವಲಾದವು.

## ೫. ಭಕ್ತರ ಅಹಂಕಾರ ಮುರಿದ ಮುರಾರಿ

ವಸ್ತ್ರಾಪಹರಣದ ಕಾಲಕ್ಕೆ ಅಸಹಾಯಕಳಾದ ದ್ರೌಪದಿ ಪರಮಾತ್ಮನಲ್ಲಿ ಪರಿಪರಿಯಿಂದ ಮೊರೆಯಿಡುತ್ತ- 'ಸುಲಿವರು (ಸೆಳೆವರು ಅಲ್ಲ!) ಊರೊಳಗುಟ್ಟ ಸೀರೆಯನು ಎಲೆ ಮುರಾಂತಕ ರಕ್ಷಿಸೈ' ಎಂದು ಸೆರಗೊಡ್ಡಿ ಬೇಡಿಕೊಂಡಾಗ ಕೃಷ್ಣನು ಒಮ್ಮೆಲೆ ಚಲಿತನಾಗಲಿಲ್ಲ. ಇಲ್ಲಿ ಅಣ್ಣನಾಗಿ ದ್ರೌಪದಿಯ ಅಳಲನ್ನು ಶೀಘ್ರದಲ್ಲಿ ಪರಿಹರಿಸದೆ ಭಗವಂತನಾಗಿ ಭಕ್ತೆಯ ಅಹಂಕಾರವನ್ನು ಮುರಿಯಲಿಚ್ಛಿಸುತ್ತಾನೆ, ಮುರಾರಿ. ದ್ರೌಪದಿಗೆ ತನ್ನ ಮಾನ ರಕ್ಷಣೆಯನ್ನು ತಾನೇ ಮಾಡಿಕೊಂಬ ಅಹಂಕಾರ. ಇದನ್ನು ಮನದೊಳರಿದು ಕೊನೆಗೆ ಆಕೆ—

ಏಕಹಸ್ತದಲಂಬರವ ಹಿಡಿ
ದೇಕ ಹಸ್ತವ ನೆಗಹಿ ಮೊರೆಯಿಡೆ
ಲೋಕನಾಥ ಮುಕುಂದ ತಾನದ ಕೇಳದಂತಿರಲು
ಆಕೆ ಮನದೊಳಗರಿದು ತನಗಿ
ನ್ನೇಕೆ ಮನದಭಿಮಾನವೆನುತಲೆ
ಲೋಕಸುಂದರಿ ಕರವೆರಡ ಮುಗಿದೆತ್ತಿಯೊರಲಿದಳು ॥

ತನ್ನ ಮೊರೆಯನ್ನು ಮುಕುಂದನು ಕೇಳದಂತಿರಲು ಇನ್ನೇಕೆ ಮನದಭಿಮಾನವೆಂದು ತನ್ನ ಉನ್ನತ ಸ್ತನಗಳನ್ನು ಮುಚ್ಚಿಕೊಂಡಿದ್ದ ಎರಡೂ ಕರಗಳನ್ನು ಎತ್ತಿ, ಪೂರ್ಣ ಶರಣಭಾವದಿಂದ ಒರಲಿದಾಗ ದ್ವಾರಕೆಯಲ್ಲಿ ಸತ್ಯಭಾಮೆಯೊಡನೆ ಲೆತ್ತವಾಡುತ್ತಿದ್ದ ಶ್ರೀಕೃಷ್ಣನು

'ನಾರಿಯ ಸೀರೆ ಅಕ್ಷಯವಾಗಲಿ' ಎಂದು ಹರಸಿದನಂತೆ. (ತಂಗಿಯ ಅಹಂಕಾರವನ್ನು ಅಣ್ಣನಿಂದ ಈ ಪರಿ ಮುರಿಸಿದ ಕವಿಯು ಗ್ರಾಮ್ಯನಲ್ಲವೆ ?) ಈಗ ಭಕ್ತಿ ಪರೀಕ್ಷೆಯಲ್ಲಿ ತಂಗಿ ತೇರ್ಗಡೆಯಾಗಿದ್ದಳು. ಭಕ್ತರ ಶರಣಭಾವದ ಆರ್ತತೆ ಭಗವಂತನ ಆರ್ತಿಯನ್ನು ಹೆಚ್ಚಿಸುತ್ತದೆ. ಆದರೆ ಒಂದು ಮಾತು. ಭಕ್ತೆಯಾದ ದ್ರೌಪದಿ ಭಕ್ತಿಯ ಮಾಯಾ ಮಾಟದಿಂದ ತನ್ನ ಕಷ್ಟಪರಂಪರೆಯನ್ನು ದಾಟಿ ಪಾರಾಗದೆ, ಜೀವನದ ಸುಖದುಃಖಗಳನ್ನು ತೀವ್ರವಾಗಿ ಬದುಕಿ ತನ್ನ ವ್ಯಕ್ತಿತ್ವವನ್ನು ಕಾಪಾಡಿಕೊಂಡು ಬರುತ್ತಾಳೆ. 'ಭಕ್ತಿ ಜೀವನದ ತೊಡಕುಗಳಿಗೆ ಸುಲಭೋಪಾಯವೆಂದು ಮಾತ್ರ ಕುಮಾರವ್ಯಾಸ ತಿಳಿಯಲಿಲ್ಲ'. ಎಂದು ಶ್ರೀ ಕೀರ್ತಿನಾಥ ಕುರ್ತಕೋಟಿಯವರು ನುಡಿದ ಮಾತು ದ್ರೌಪದಿಯ ಪಾತ್ರಕ್ಕಂತೂ ತಪ್ಪದೆ ಅನ್ವಯಿಸುತ್ತದೆ. 'ಭಕ್ತಿಯಿಂದಾಗಿ ಮನುಷ್ಯನ ಅನುಭವ ಪ್ರಪಂಚ ಮುಳುಗುವುದಿಲ್ಲ.' ಎಂಬುದು ನಿಜ.

ಹೀಗೆಯೇ ಕೌರವನ ಸಭೆಯಲ್ಲಿ ಅವನ ಅಹಂಕಾರವನ್ನು ಮುರಿಯುವ ರೀತಿಯೂ ಪವಾಡಮಯವಾಗಿಯೇ ತೋರುತ್ತದೆ. ಸಂಧಿಗೆಂದು ಹಸ್ತಿನಾವತಿಗೆ ಬಂದ ಕೃಷ್ಣನು ದುರ್ಯೋಧನನ ಅರಮನೆಯ ರಾಜಾತಿಥ್ಯವನ್ನೊಲ್ಲದೆ ವಿದುರನ ಮನೆಯಲ್ಲಿ ಒಕ್ಕುಡಿತೆ ಹಾಲಿನಿಂದ ಇರುಳ ನೂಕುತ್ತಾನೆ. ಮರುದಿನ ರಾಜಸಭೆಗೆ ತನ್ನ ಬರವಿನ ವಾರ್ತೆಯನ್ನು ಹೇಳಿ ಕಳುಹುತ್ತಾನೆ. ಭೀಷ್ಮನು ಭಕ್ತಿ ಗೌರವಗಳಿಂದ ಭಗವಂತನನ್ನು ಬರಮಾಡಿಕೊಳ್ಳುತ್ತಾನೆ. ದುರ್ಯೋಧನನು ಮಾತ್ರ ಸಿಂಹಾಸನದಿಂದ ಕೆಳಗೆ ಸಹ ಇಳಿಯದೆ ಬಿಗುಮಾನ ತೋರುತ್ತಾನೆ :

ಸೆಣಸು ಸೇರದ ದೇವನಿದಿರಲಿ
ಮಣಿಯುದಾತನ ಕಾಣುತವೆ ಧಾ
ರುಣಿಯನೊತ್ತಿದನುಂಗುಟದ ತುದಿಯಿಂದ ನಸುನಗುತ
ಮಣಿಖಚಿತ ಕಾಂಚನದ ಪೀಠದ
ಗೊಣಸು ಮುರಿದುದು ಮೇಲೆ ಸುರ ಸಂ
ದಣಿಗಳಾ ಎನೆ ಕವಿದು ಬಿದ್ದನು ಹರಿಯು ಚರಣದಲಿ ॥

ಈ ಅಹಂಕಾರ ಮೂರ್ತಿಗೆ ಒಂದಿಷ್ಟು ಪಾಠ ಕಲಿಸಬೇಕೆಂದು ಶ್ರೀಕೃಷ್ಣನು ಮೆಲ್ಲಗೆ ತನ್ನ ಉಂಗುಷ್ಟದಿಂದ ಧರಣಿಯನ್ನು ಒತ್ತುತ್ತಾನೆ. ಮಹಾರಾಜನು ದಿಂಡುರುಳಿ ಹರಿಯ ಚರಣಗಳಲ್ಲಿ ಹೊರಳಿ ಬೀಳುತ್ತಾನೆ. ಇಷ್ಟು ಮಂಗಳಾರತಿ ಸಾಕಲ್ಲವೆ ಈ ಮಮಕಾರದ ಮಟ್ಟೆಗೆ ? ಆದರೆ ಈ ಅವಮಾನಕ್ಕೆ ಈ ಅಸುರಾರಿಯ ಮಾತಿನ ಮಂತ್ರಾಕ್ಷತೆ ಬೇರೆ :

ಧರಣಿಪತಿ ಸಿಂಹಾಸನದ ಮೇ
ಲಿರದೆ ಬಹರೇ, ನಾವು ಬಂದೇ
ಹರಸುವೆವು ತಪ್ಪಾವುದೆನುತೆತ್ತಿದನು ಮಸ್ತಕವ॥

ಮನುಷ್ಯರಲ್ಲಿ ಮನುಷ್ಯರಂತೆ ನಡೆ ನಡೆಯುತ್ತಲೆ ಭಗವಂತನು ದುಷ್ಕೃತಿಗಾರರಿಗೆ ಅಲ್ಲಿಂದಲ್ಲಿಯೆ ಯೋಗ್ಯ ಶಾಸನ ವಿಧಿಸಿ ಮುಂದೆ ನಡೆಯುತ್ತಾನೆ.

## ೬. ದುರತ್ಯಯವಾದ ದೈವೀಸಂಕಲ್ಪ

ಆದರೆ ಇಲ್ಲಿ ಒಂದು ಪ್ರಶ್ನೆ. ಹೆಜ್ಜೆಹೆಜ್ಜೆಗೆ ಬವಣೆಬಟ್ಟು ಬಾಯ್ಬಿಡುವ ಕುಂತಿ. ದ್ರೌಪದಿ, ಪಾಂಡವರು ಇಷ್ಟೊಂದು ಹಿಂಸೆ ಪಟ್ಟು, ವನವಾಸವನ್ನು ಅನುಭವಿಸುವುದನ್ನು ಶ್ರೀಕೃಷ್ಣನೇಕೆ ಬಿಡಿಸಲಿಲ್ಲ ? ಅಭಿಮನ್ಯು ಚಕ್ರವ್ಯೂಹವನ್ನು ಹೊಕ್ಕಾಗ ಈ ಭಕ್ತ ಕುಟುಂಬಿ ತನ್ನ ಪಂಚಪ್ರಾಣಗಳಂತಿದ್ದ ಪಾಂಡವರನ್ನು ಕಷ್ಟ, ಕಂಬನಿಗಳಿಂದ ಏಕೆ ಉಳಿಸಲಿಲ್ಲ ? ಇದಕ್ಕೆಲ್ಲ ಭಗವಂತನ ಉತ್ತರ ಬೇರೆಯೆ ಇದೆ. ಅಭಿಮನ್ಯು ಕುಮಾರ ಸಾಯಲೆಬೇಕಿತ್ತು. ಇಲ್ಲದಿದ್ದರೆ ಕಲಿ ಪ್ರವೇಶವಾಗುವುದೆ ಸಾಧ್ಯವಿರಲಿಲ್ಲ. ಅಭಿಮನ್ಯು ಕಲಿಯನ್ನು ಕೈಕೊಳ್ಳುತ್ತಿದ್ದನೆ ? ಕೊಂದು ಹಗೆಯೆನಿಸಿದ ಶ್ರೀಕೃಷ್ಣನು ತನ್ನ ಸಂಕಲ್ಪದ ಮೇರೆಗೆ, ತನ್ನ ದೂರಾಲೋಚನೆಯ ಮೇರೆಗೆ ಅಭಿಮನ್ಯುವಿನ ಸಾವನ್ನು ಮುಂಗಂಡವನಾಗಿರುತ್ತಾನೆ. ಮಗನ ಸಾವಿನ ಸುದ್ದಿಯನ್ನು ಕೂಡ ಪಾರ್ಥನಿಗೆ ಆತ ಕೊಳದಲ್ಲಿಳಿದಾಗ ಆಕಾಶವಾಣಿಯ ಮೂಲಕ ಹೇಳಿಸುತ್ತಾನೆ. ದೈವೀ ಸಂಕಲ್ಪ ದುರತ್ಯಯ. ಅವರವರ ದೈವದ, ವಿಧಿಯ, ಕರ್ಮದ ಮುಖಾಂತರ ಈಶ ಸಂಕಲ್ಪ ಈಡೇರುತ್ತದೆ.

ಕೃಷ್ಣನ ದೈವೀ ಪಾತ್ರ ಮನುಷ್ಯ ಊಹೆಗೆ ನಿಲುಕದು ಎಂಬಂತೆ ಇದೆ ಇಲ್ಲಿ ಬಂದಿರುವ ಅವನ ಪಾತ್ರ ಚಿತ್ರಣ. ಒಮ್ಮೆ ಮನುಷ್ಯ ಮಾತ್ರನಾಗಿ ನಟಿಸಿದ ಕೃಷ್ಣ ಇನ್ನೊಮ್ಮೆ ಪರಮಾತ್ಮನಾಗಿ ಊಹಾತೀತನಾದ ಅದ್ಭುತಗಳನ್ನು ಎಸಗುತ್ತಾನೆ. ಅಂತೆಯೆ 'ಶ್ರೀಕೃಷ್ಣರಾಯನು ಮನುಜನಲ್ಲ' ಎಂದು ಸನತ್ಸು ಜಾತಮುನಿ ಧೃತರಾಷ್ಟ್ರನಿಗೆ ಬೋಧಿಸುತ್ತಾನೆ.

## ೭. ಭಕ್ತಿಯ ಸ್ವರೂಪಗಳು

ಶ್ರೀಕೃಷ್ಣನ ಭಕ್ತರು ತೋರುವ ಭಕ್ತಿಯ ಸ್ವರೂಪ ವೈವಿಧ್ಯ ಮಯವಾಗಿ ಚಿತ್ರಿತವಾಗಿದೆ ಕುಮಾರವ್ಯಾಸನ ಕಾವ್ಯದಲ್ಲಿ.

ಶತಶೃಂಗ ಪರ್ವತದಲ್ಲಿ ತಪೋನಿರತನಾದ ಪಾಂಡು- 'ಮುರಹರ ಧ್ಯಾನೈಕ ಪೀಯೂಷಾಭಿಷೇಕದಲಿ' ಹೊರೆದನಂತೆ. ಆದರೆ ಆಗಿನ್ನೂ ಕಾವ್ಯದಲ್ಲಿ ಕಾಲಕ್ರಮದಲ್ಲಿ ಮುರಹರನ ಜನನವೆ ಆಗಿರಲಿಲ್ಲ. ಅರ್ಜುನನು ಹುಟ್ಟುವುದಕ್ಕಿಂತ ಮುಂಚೆ ಮೂರು ತಿಂಗಳು ಆತ ಜನ್ಮಿಸುತ್ತಾನೆಂದು ಹೇಳಲಾಗಿದೆ. ಆದರೆ ಇಲ್ಲಿ ಮುರಹರನೆಂದರೆ ಪರಮಾತ್ಮನೆಂಬ ಸಾಮಾನ್ಯಾರ್ಥಸೂಚಿಯೆಂದು ಗ್ರಹಿಸಬೇಕು.

ದ್ರುಪದನು ತನ್ನ ಮಗಳಾದ ದ್ರೌಪದಿಯ ವಿವಾಹ ಚಿಂತನೆ ಯಲ್ಲಿ 'ಪಾಂಡುರಾಯರನು ತೋರಿಸನೆ ಗದುಗಿನವೀರನಾರಯಣ' ಎಂದು ವಿಮಂಚನೆಗೊಳಗಾಗುತ್ತಾನೆ. ಮುಂದೆ ಭಾರತಯುದ್ಧ ಸನ್ನಿಹಿತವಾದಾಗ ದ್ರುಪದರಾಯನು ಶ್ರೀಕೃಷ್ಣನಿಗೇ ನಾಯಕ ಪಟ್ಟಕಟ್ಟಿ - 'ಕಾಲಲೊದೆದುದನೋವಿ ತಲೆಯೊಳು ಹೊತ್ತು ನಡೆಸುವೊಡಾವು ಬಲ್ಲೆವು ಜೀಯ' ಎಂದು ಕೈಮುಗಿಯುತ್ತಾನೆ.

ಪಾಂಡವರಂತೂ ಶ್ರೀಕೃಷ್ಣನ ಅನುಮತಿಯಿಲ್ಲದೆ, ಆತನ ನಾಮಸ್ಮರಣೆಯಿಲ್ಲದೆ ಒಂದು ಹುಲ್ಲುಕಡ್ಡಿಯನ್ನೂ ಸರಿಸುವುದಿಲ್ಲ. ದ್ರೌಪದಿಯ ಸ್ವಯಂವರ ಕಾಲಕ್ಕೆ 'ಇತ್ತ ನೋಡೇ ತಂಗಿ ಯದು ಭೂಪೋತ್ತಮನು' ಎಂದು ಧೃಷ್ಟದ್ಯುಮ್ನನು ಮುರಾರಿಯನ್ನೆ

ಅನುರೂಪ ವರನೆಂದು ತೋರಿದಾಗ ದ್ರೌಪದಿಗೆ ಆತನಲ್ಲಿ ಪೂಜ್ಯ ಭಾವ ಮೂಡಿ ಮನದೊಳಗೆ ವಂದಿಸುತ್ತಾಳೆ.

ವಿರಾಟರಾಯನಿಗೆ ಉತ್ತರೆ ಅಭಿಮನ್ಯು ವಿವಾಹದ ಸಂತೋಷಕ್ಕಿಂತ ಮಗಳ ಮದುವೆಯ ನೆಪದಲ್ಲಿ ಶ್ರೀಕೃಷ್ಣ ದರ್ಶನ ಘಟಿಸುವುದಲ್ಲ ಎಂಬ ಹಿಗ್ಗು. 'ಒಡಬಡಲಿ ಮೇಣಿರಲಿ ಗುರು, ನಿಮ್ಮಡಿ ಮುರಾರಿಯ ತೋರಿಸುವಿರಾದೊಡೆ ಕೃತಾರ್ಥ ತಾನೆನುತ ಹಿಗ್ಗಿದನು ಮತ್ಸ್ಯನೃಪ'. (ವಿ. ೧೮–೨೮.)

ವಸುದೇವನು ಸಹ ತನ್ನ ಮಗನಾದ ಶ್ರೀಕೃಷ್ಣನ ಮಾಹಾತ್ಮ್ಯೆಗೆ ಮಾರುವೋದ ಭಕ್ತ. 'ಮಗನ ಶೀಲವು ನರರ ಪರಿಯಲ್ಲ' ಎಂಬುದನ್ನು ಆತಬಲ್ಲ.

ಕೃಷ್ಣನ ಬಗ್ಗೆ ಭೀಷ್ಮರು ತೋರುವ ಭಕ್ತಿಯ ಪ್ರಕಾರವೆ ಬೇರೆ. ವಿದುರನು ತೋರುವ ಪ್ರಕಾರವೆ ಬೇರೆ. ವಿದುರನು ಪರಮಜ್ಞಾನಿ, ಅನುಭವಿಕ, ನ್ಯಾಯನಿಷ್ಠುರಿ. ಕೌರವನು ತನ್ನನ್ನು ಕೃಷ್ಣ ಭಕ್ತ, ಪಾಂಡವಪಕ್ಷಪಾತಿ ಎಂದು – ಅವಮಾನ ಮಾಡಿ 'ತೊತ್ತಿನಮಗ' ಎಂದು ಅವಹೇಳನೆಗೆ ಗುರಿಮಾಡಿದಾಗ, ಕೌರವನ ರಕ್ಷಣೆಗಾಗಿ ಎಂದು ಮೀಸಲಾಗಿಟ್ಟಿದ್ದ ಧನುಸ್ಸನ್ನು ಲಟಲಟನೆ ಮುರಿದು ಒಗೆಯುತ್ತಾನೆ.

ಕಡು ಮುಳಿಸಿನಲಿ ಭೀಮ ನಿನ್ನಯ
ತೊಡೆಗಳನು ಕಡಿವಾ ಸಮಯದೊಳು
ತಡೆದು ನಿನ್ನಯ ಕಾಯಬೇಕೆಂದುಳುಹಿದೆನು ಧನುವ
ಕೆಡೆ ನುಡಿಸಿಕೊಂಡಿನ್ನು ಕಾವೆನೆ

ನುಡಿದು ಫಲವೇನೆನುತ ವಿದುರನು
ಹಿಡಿದ ಬಿಲ್ಲನು ಮುರಿದನಾ ಕುರುರಾಯ ಬೆರಗಾಗೆ ॥

ಇಂತಹ ಕಟ್ಟಭಿಮಾನಿ ವಿದುರ ಕೃಷ್ಣನ ಕಡು ಭಕ್ತ. ಶ್ರೀಕೃಷ್ಣನು ತನ್ನ ಮನೆವರೆಗೆ ನಡೆತಂದಾಗ ಅವನಿಗಾದ ಆನಂದವು ಹುಚ್ಚು ಹಿಡಿಸಿದ ರೀತಿಯದಾಗಿತ್ತು. ಬಾಗಿಲಲಿ ಭಗವಂತನ ಬರವ ಕಂಡಾಗ ಈ ಪರಮ ಭಾಗವತನ ಪರಮಾನಂದ ಹೇಳತೀರದು. ಭಗವಂತನ ಪಾದಕಮಲಗಳನ್ನು ತನ್ನ ಕರಗಳಿಂದ ಮುಟ್ಟಿ :

ತೊಳಲುವುಪನಿಷದರಿಕೆಯಿವು ಶ್ರುತಿ
ಗಳ ಸರಾಗದ ಬಳಕೆಯಿವು ಮುನಿ
ಗಳ ಸಮಾಧಿಗಳಾದಿಯಿವು ಯೋಗಿಗಳ ಬಗೆಗಳಿವು
ಎಲೆಲೆ ಭಕುತರ ಭಾಗ್ಯಶಾಲಿಯ
ಬೆಳೆಗಳಿವೆಲಾ, ಶಿವ ಎನುತ ಪದ
ನಳಿನಯುಗಳದೊಳೊಡಲ ನೀಡಾಡಿದನು ಹರುಷದಲಿ॥

ಆ ಪದಯುಗಳವನು ಪೊಗಳಿ ಪೊಗಳಿ ಸಾಲದೆ—

ನೋಡಿದನು ಮನದಣಿಯೆ ಮಿಗೆ ಕೊಂ
ಡಾಡಿದನು ಬೀದಿಯಲಿ ಹರಿದೆಡೆ
ಯಾಡಿದನು ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯ
ಕೂಡೆ ಕುಣಿದನು ಮನೆಯ ಮುರಿದೀ
ಡಾಡಿದನು ಮೈಮರೆದ ಹರುಷದ
ಗಾಡಿಕೆಯಲಪ್ರತಿಮ ನೆನೆದನು ಭಕುತಿ ಕೇಳಿಯಲಿ ॥

ಜ್ಞಾನಿಯಾದ ವಿದುರನ ಭಕ್ತಿವಶನಾಗಿ ಮುಗ್ಧನಂತೆ, ಭ್ರಮಿಷ್ಠನಂತೆ ಕುಣಿದಾಡುವುದು ಒಂದು ಪರಮಾವಧಿ. ಇಲ್ಲಿ ಕುಮಾರವ್ಯಾಸನೆ ವಿದುರನಾಗಿ ಭಕ್ತಿಕೇಳಿಯಲಿ ಮೈಮರೆದು ಎಸೆದಂತಿದೆ.

ಭೀಷ್ಮನ ವೀರ ಭಕ್ತಿ ತನ್ನಗೆ ಒಂದು ಕೆಚ್ಚಿನಿಂದ ಮೆರೆಯುತ್ತದೆ. ಅವನ ಭಕ್ತಿಯ ಪಾರಮ್ಯದ ಪ್ರಖರತೆಯ ಮುಂದೆ ಕೃಷ್ಣನ ದಿವ್ಯತೇಜವು ಮಸುಳಿಸಿ, ಆ ಯೋಗೇಶ್ವರನಲ್ಲಿಯೂ ತಾಮಸಿಕೆ ತಲೆದೋರುತ್ತದೆ. ಇದಕ್ಕೆ ಕಾರಣ ಕೃಷ್ಣನು ತಾನು ನಿಶ್ಶಸ್ತ್ರನೆಂದು ಸಾರಿದ್ದರೂ ಭಕ್ತನಾದ ಭೀಷ್ಮನ ಮೇಲೆ ಚಕ್ರವನ್ನೆತ್ತುವುದು. ಭೀಷ್ಮನಿಗೊ ಕೃಷ್ಣನಾಮದ ಜೋಡು ತನ್ನನು ಕಾಯುವುದು ಎಂಬ ಆತ್ಮವಿಶ್ವಾಸ ವಜ್ರದೃಢವಾಗಿದೆ.

ಇಂತಹ ಸೆಣಸುವ ಭಕ್ತಿ ಭೀಷ್ಮನದಾದರೂ ಜೋಳದ ಪಾಳಿಗಾಗಿ ಆತ ಕೌರವನ ಪಕ್ಷವಹಿಸಿ, ಪಾಂಡವರ ವಿರುದ್ಧ, ಸ್ವತಃ ಶ್ರೀಕೃಷ್ಣನ ವಿರುದ್ಧ ಹೋರಾಡಬೇಕಾಗುತ್ತದೆ. ಆದರೆ ಅಗ್ರಪೂಜೆಯಕಾಲಕ್ಕೆ ಕೃಷ್ಣನಿಗೇ ಅಗ್ರಪೂಜೆ ಸಲ್ಲತಕ್ಕದ್ದೆಂದು ಸಾಧಿಸುವಾಗ ಕೃಷ್ಣನ ದೇವಗುಣಗಳನ್ನು ಬಣ್ಣಿಸುವ ಪದ್ಯಗಳೆಲ್ಲವೂ 'ಭೀಷ್ಮೋಪನಿಷತ್ತು' ಎಂಬಂತಿವೆ. ಅಧಿಯಜ್ಞನಾದ ಆತನನ್ನು ರೂಪಕಾತ್ಮಕವಾಗಿ ವರ್ಣಿಸುತ್ತಾನೆ.

'ಯಜ್ಞದಧಿಪತಿ ಈತನೀತನು
ಯಜ್ಞ ಪುರುಷನು ಸ್ರುಕ್‌ಸ್ರುವಾದಿ
ಯಜ್ಞಸಾಧನಸೀತನೀತನು ಮಂತ್ರಕಾಲಾತ್ಮ
ಯಜ್ಞವೀತನು ಕರ್ಮವೀತನು

ಯಜ್ಞದಲಿ ಯಜಮಾನನೀತನು
ಯಜ್ಞ ಫಲವೀ ದೇವಕೀಸುತನೆಂದನಾ ಭೀಷ್ಮ

ಸೇನಾಪತ್ಯವನ್ನು ವಹಿಸಿದ ಭೀಷ್ಮರಿಗೆ ಧರ್ಮಸಂಕಟ. ಅನ್ನದ ಋಣಕ್ಕಾಗಿ ಕೌರವನ ಪಕ್ಷವಹಿಸಿ ಕಾದಾಡಬೇಕು. ಧರ್ಮ, ನ್ಯಾಯ, ಅಂತಃಕರಣಗಳಿಂದಾಗಿ ಪಾಂಡವರತ್ತ ಮನಸ್ಸು ವಾಲುತ್ತದೆ. ಅಲ್ಲದೆ ಸ್ವತಃ ಶ್ರೀಕೃಷ್ಣನೆ ಪಾರ್ಥನ ಸಾರಥಿ. ಶ್ರೀಕೃಷ್ಣನ ಮಾಹಾತ್ಮ್ಯೆಯನ್ನು ಭೀಷ್ಮರು ಬಲ್ಲರು. ಅಲ್ಲದೆ ತನ್ನ ಹಾನಿ ಹರಿಬಗಳು ಶ್ರಿಕೃಷ್ಣನವೆ ಎಂಬುದನ್ನೂ ಬಲ್ಲ ವೀರಭಕ್ತ ಭೀಷ್ಮ. ಇಷ್ಟಾಗಿಯೂ ಈ ಭಕ್ತ ತನ್ನ ಭಗವಂತನನ್ನೇ ಎದುರಿಸಿ ಸೆಣಸಲು ನಿಂತಿದ್ದಾನೆ. ತನಗೆ ಸೇನಾಪತಿಪಟ್ಟ ಕಟ್ಟಿದ ಕೌರವನ ಮುಂದೆ ನಿಶ್ಯಸ್ತ್ರನಾಗಿ ಉಳಿವೆನೆಂಬ ಕೃಷ್ಣನ ವಚನವನ್ನು ಹುಸಿಮಾಡಿ ಆತನ ಕೈಯಿಂದ ಚಕ್ರವನ್ನು ಹಿಡಿಸಿ ಬಿಡುತ್ತೇನೆಂದು ಘೋಷಿಸಿದ್ದಾನೆ.

ಕಾಳೆಗಕ್ಕೆ ಮೊದಲಾಗುತ್ತದೆ. ಭೀಷ್ಮರು ಪಾರ್ಥನೊಡನೆ ಹಣಾಹಣಿ ಕಾದಾಡುತ್ತಾರೆ. ಆದರೆ ಪಾರ್ಥಸಾರಥಿ, ತನ್ನ ಪ್ರಾಣದಂತಿದ್ದ ಪಾರ್ಥನನ್ನು ಹಿಂದಿಕ್ಕಿಕೊಂಡು ರಕ್ಷಣೆ ನೀಡುತ್ತಿದ್ದಾನೆ :

ಎತ್ತಲೊಲೆದನದೆತ್ತ ಸರಿದನ
ದೆತ್ತ ಜಾರಿದನೆತ್ತ ತಿರುಗಿದ
ನೆತ್ತ ಹಿಂಗಿದನೆತ್ತ ತಳಕಿದನೆತ್ತಲುರುಬಿದನು
ಅತ್ತಲತ್ತಲು ರಥ ಹಯುವ ಬಿಡ
ದೊತ್ತಿ ಬೀದಿಗೆ ನೂಕಿ ಪಾರ್ಥನ
ಮುತ್ತಯನ ಸಮ್ಮುಖಕೆ ಬಿಡದೌಕಿದನು ಮುರವೈರಿ ॥

ಹೀಗೆ ಭಗವಂತನೆ ಬೆಂಗಾವಲಾಗಿ ಅರ್ಜುನನನ್ನು ಕಾಯುತ್ತಿರಲು ಭೀಷ್ಮನು ಕೆರಳಿದನು. ಅರ್ಜುನನ ಉರವಣೆಯ ಗೆಲಲು ಮುರಾರಿಯ ಭರಪಸವ ತಗ್ಗಿಸಬೇಕು–ಎಂದು ನಿಶ್ಚಯಿಸಿ ಹರಿಯ ಸಿರಿಯೊಡಲಿನಲಿ ಸರಳಿನ ಸುರಿವಳೆಯ ಕರೆಯುತ್ತಾನೆ. ಹತ್ತು ಶರಗಳಿಂದ ಕೃಷ್ಣನನ್ನು ಮುತ್ತಿ ಭಾರ್ಗವದತ್ತವಾದ ಬಾಣವನ್ನು ದೇವನ ನೊಸಲಲ್ಲಿ ಕೀಲಿಸುತ್ತಾನೆ. ಈ ಭೀಷ್ಮನ ಉಪಟಳಕ್ಕೆ ಕ್ರುದ್ಧನಾದ ಕೃಷ್ಣನು (ತನ್ನ ಭಾಷೆಯನ್ನು ಮರೆತು) ಚಕ್ರಕ್ಕೆ ಕೈ ತುಡುಕುತ್ತಾನೆ. ಯೋಗೇಶ್ವರನಿಗೂ ಕೋಪಾಟೋಪ !

ಕೆಂಪ ಕಾರಿದ ವಾಲಿಗಳು ಮೈ
ಕಂಪಿಸಿದುದಡಿಗಡಿಗೆ ರೋಷದ
ಬಿಂಪಿನೊಳು ತಗ್ಗಿದನು ಗಂಟಿಕ್ಕಿದನು ಹುಬ್ಬುಗಳ
ಸೊಂಪುಗೆಟ್ಟುದು ಸಿರಿವದನ ಮನ
ದಿಂಪು ಬೀತುದು ಭಕ್ತ ಮೋಹದ
ಲಂಪು ಮಸುಳಿತು ಬಿಸುಟುಕಳೆದನು ಹಯದ ವಾಘೆಗಳ ॥

ಮೂರುಲೋಕಗಳನ್ನು ರಕ್ಷಿಸುವ ಮುರಾರಿಯೆ ರಣತಾಮಸಿಕೆಯನ್ನು ಹಿಡಿದ ಮೇಲೆ ಮುಂದೇನು ? ಚಕ್ರಧಾರಿಯಾಗಿ ಕುಮಾರವ್ಯಾಸನ ಕೃಷ್ಣ ನುಡಿಯುತ್ತಾನೆ :

ಕೆಂಡವಾಗಲಿ ಲೋಕ ದಿವಿಜರ
ಹೆಂಡಿರೋಲೆಯು ಕಳಚಿ ಹೋಗಲಿ
ದಿಂಡುಗೆಡೆಯಲಿ ಮೇರು, ಮೇದಿನಿ ಸಿಲಲಿ ವಿತಳದಲಿ
ಗಂಡು ಗೆಡಿಸಿದರಿಲ್ಲ ದಾನವ

ದಿಂಡೆಯರು ಹಲರೆಮ್ಮೊಡನೆ ಮಾ
ರ್ಕೊಂಡವರು ಮಾವಾ ಪ್ರತಿಜ್ಞೆಯ ತೊಡಕು
ಬೇಡೆಂದ ॥

ಯಾವ ಪ್ರತಿಜ್ಞೆಯ ತೊಡಕೂ ಬೇಡವೆಂದು ಚಕ್ರವನ್ನು ಕಲ್ಲೈಸಿ ನೋಡುತ್ತ ಭಕ್ತನಾದ 'ಭೀಷ್ಮನನ್ನು ಕಡಿದು ಭೂತಗಣಕ್ಕೆ ಬೋನವನಿಕ್ಕುವೆ'ನೆಂದು ಮುಂದರಿಯುತ್ತಾನೆ. ಆತನ ಚಕ್ರದ ಊಷ್ಮೆಯಲಿ ಉದಧಿಗಳು ಬತ್ತುತ್ತವೆ. ಸುರನರೋರಗಜಗದ ಕಂಗಳು ಕೆತ್ತಿ ಹೋಗುತ್ತವೆ. ಮುರಾರಿಯಲ್ಲಿ ಕವಿ ಇಂತಹ ಒಂದು ರೌದ್ರವನ್ನು ರೂಪಿಸುವುದು ನಮಗೆ ವಿಚಿತ್ರವೆನಿಸುತ್ತದೆ. ಆದರೆ ಅರ್ಜುನನ ಮೇಲೆ, ಆತನ ಸಾರಥ್ಯವಹಿಸಿದ ತನ್ನ ಮೇಲೆ ಈ ಪಲಿತ ಭೀಷ್ಮನು ಬಾಣ ಪ್ರಯೋಗ ಮಾಡುವುದೆಂದರೆ ? ಯೋಗೇಶ್ವರನಿಗೂ ಸಿಟ್ಟು, ಸೇಡು, ಅಭಿಮಾನ, ಅಹಂಕಾರ ! ಒಳ್ಳೆಯ ಕವಿಜಾಣ್ಮೆ ! ಶ್ರೀಕೃಷ್ಣನು ಚಕ್ರವನ್ನು ಹಿಡಿಯುವುದೆ ತಡ ಭೀಷ್ಮನು ತನ್ನ ಚಾಪವನ್ನೂ ಶರವನ್ನೂ ಭೂಮಿಗೆ ಬಿಸುಟು ಹರಿಯಚರಣದಲ್ಲಿ ಹಣೆಯ ಚಾಚುತ್ತಾನೆ. ಮುರಹರ, ಸರಸಿಜಾಂಬಕ ರಾಮ, ರಕ್ಷಿಸು. ತರಳನಲಿ ಗುಣದೋಷದರಕೆಯೆ ದೇವ !' ಎಂದು ಕೈಜೋಡಿಸುತ್ತಾನೆ. ಇದೊಳ್ಳೆಯ ಭಕ್ತಿ! ಮಧುರವೊ, ವೈರವೊ, ವೀರವೊ! ಪುರಂದರರ ಮುಪ್ಪುರಿಯೋ ! ಶ್ರೀ ಕೃಷ್ಣನ ಭಕ್ತರ ಮಾದರಿಗಳಲ್ಲಿ ಭೀಷ್ಮರ ಮಾದರಿಯೆ ಒಂದು ಬೇರೆ. ಕ್ಷತ್ರಿಯವೀರನೆಂದು ಪರಿಬವನ್ನು ಹೊತ್ತ ಸೇನಾಪತಿಯೆಂದು, ಸ್ವಾಮಿಕಾರ್ಯದ ಕಿಂಕರನೆಂದು ಸ್ವಧರ್ಮಕ್ಕೆ ವಿರುದ್ಧವಲ್ಲದಂತೆ ಶತ್ರುಪಕ್ಷದ ಮೇಲೆ ಅರ್ಥಾತ್

ಭಗವಂತನ ಮೇಲೆಯೆ ಕೈಮಾಡಿದರೂ ಕೊನೆಯಲ್ಲಿ ಭಕ್ತನಿಗೇ ಗೆಲುವು ಎಂಬುದನ್ನು ಕವಿ ಸೂಕ್ಷ್ಮವಾಗಿ ತೋರಿದ್ದಾನೆ. ತಾನು ಮಹಾರಥಿ ಎಂಬುದಕ್ಕಿಂತ ತಾನು ಮಹಾಭಕ್ತನೆಂಬ ಹೆಮ್ಮೆಯೆ ದೊಡ್ಡದು, ಭೀಷ್ಮನಿಗೆ. ಕೊನೆಯಲ್ಲಿ ಆತನ ವೀರ ಕ್ಕಿಂತ ವೀರ ಭಕ್ತಿಗೇ ಗೆಲುವಾಗುತ್ತದೆ. ಭಕ್ತನ ಒಂದು ಕೂದಲೆಳೆ ಕೊಂಕಿದರೆ ಅದರ ಹೊಣೆ ಭಕ್ತನದಲ್ಲ, ಭಗವಂತನದು ಎಂಬ ಅರಿವನ್ನು ಮಾಡಿಕೊಡುತ್ತಾನೆ ಶ್ರೀಹರಿಗೆ. ತನ್ನ ಮಹಿಮೆ ಯನ್ನು ತಾನೇ ಮರೆತು ಭಕ್ತನ ಮೇಲೆ ಚಕ್ರವನ್ನೆತ್ತಿದ ಭಗವಂತನ ವಿಭ್ರಮ ವಿಲಾಸವನ್ನು ಕಂಡು ಭೀಷ್ಮನಿಗೆ ನಗೆ. ರೋಮರೋಮ ಗಳಲ್ಲಿ ಅಖಿಲ ಭುವನಸ್ತೋಮವೆ ನಲಿದಾಡುವಂತಹ ಮಹಿಮೆ ಯುಳ್ಳ ನಳಿನನಾಭನಿಗೆ ಈ ಮರುಳುತನವೆತ್ತ? ಈ ರಣತಾಮಸಿಕೆ ತಾನೆತ್ತ ?

ನೀನು ಖತಿಯನು ಹಿಡಿಯೆ ನಿನ್ನ ಸ
ಘಾನತನವನು ಬಲ್ಲ ಯೋಗಿಗ
ಳೇನನೆಂಬರು ತಮ್ಮೊಳಗೆ ಕೈಹೊಯ್ದು ಮಿಗೆನಗುತ
ಮಾನವರು ಕಡುಮೂರ್ಖರೆಂದೇ
ಮಾನ ಗರ್ವವ ತಳೆದೆ ಸಾಕಿ
ನ್ನೇನ ಹೇಳುವೆ ನಿನ್ನ ತಕ್ಕನು ಬಲ್ಲೆ ಹೋಗೆಂದ ॥

ತಾನು ಭಾಗವತ ಭಕ್ತನಾದುದರಿಂದ ತನಗೆ ಭಂಗವಿಲ್ಲೆಂಬ ಭರವಸೆಯಿಂದಲೆ ಮಾತನಾಡುತ್ತಾನೆ:

ದೇವ ನೀ ಬಿಟ್ಟ ಕೊಲುವಡೆಯು ನಾ
ಸಾವೆನೆ ?

ಭಗವಂತನಿಗೇ ಭಕ್ತನ ಸವಾಲು ಇದು. ಏಕೆಂದರೆ ಭಗವಂತನಿಗಿಂತ ಭಕ್ತನೇ ಮಿಗಿಲು ಎಂಬ ನಿಲುವು ಭಕ್ತ ಶ್ರೇಷ್ಠನಾದ ಈ ನಾರಣಪ್ಪನದು. ತಾನಾರೆಂಬುದನ್ನು ಕೃಷ್ಣನರಿಯನು ಎಂದು ಹೇಳುವ ಭೀಷ್ಮನ ಧೈರ್ಯವು ಎಲ್ಲಿಯದು?

… … … … … ತಾನಾರೆಂಬುದ
ದೇವರರಿಯಿರಲ್ಪೈ ವೃಥಾ ಸಂಭಿನ್ನರೋಷದಲಿ

ಹಾಗಾದರೆ ಈ ಭಕ್ತನ ರಕ್ಷಾಕವಚ ಯಾವುದು ?

ದೇವನಾಮದ ಜೋಡು ನಮ್ಮನು
ಕಾವುದೈ ನೀ ಮುನಿದಡೆಯು, ನಿಮ
ಗಾವು ಹೆದರೆವು, ನಾಮಧಾರಿಗಳತುಲಬಲರೆಂದ॥

ಹೀಗೆ ಭೀಷ್ಮನು ತನ್ನ ಭಕ್ತಿಯ ಬಲದಿಂದಲೆ ಶ್ರೀ ಕೃಷ್ಣನನ್ನು ಗೆಲ್ಲುತ್ತಾನೆ. 'ಭಕ್ತಾದಿಚ್ಛೇತ್ ಪರಾಜಯಂ' ಎಂದು ಹೇಳೋಣವೆ? ಭೀಷ್ಮನ ಭಕ್ತಿಗೆ ಮೆಚ್ಚಿ, ತನ್ನ ತಾಮಸಿಕೆಗೆ ನಾಚಿ ಕೃಷ್ಣನು ಮೆಲ್ಲನೆ ತನ್ನ ಚಕ್ರವನ್ನು ಮುಚ್ಚಿಕೊಳ್ಳುತ್ತಾನಂತೆ.

ಆದರೆ ! ನಿಪುಣ ರಾಜಕಾರಣಿಯಾಗಿ ಭೀಷ್ಮನಿಂದ ಪಾಂಡವರನ್ನು ಗೆಲಿಸುವ ಗುಟ್ಟನ್ನು ಭೀಷ್ಮನಿಂದಲೆ ತಿಳಿದುಕೊಂಡು, ಆ ಮೇರೆಗೆ ಶಿಖಂಡಿಯನ್ನು ಮುಂದೆ ಮಾಡಿ ಭೀಷ್ಮನ ಕೊನೆಯನ್ನು ಸಾಧಿಸುತ್ತಾನೆ ಶ್ರೀಕೃಷ್ಣ. ಶ್ರೀಕೃಷ್ಣನು ವಹಿಸುವ ಪಾತ್ರದ ರಹಸ್ಯವನ್ನು ಅರಿಯುವುದು ಗಹನ. ಭೀಷ್ಮರ ಸೋಲಿನ ಉಪಾಯವನ್ನು ಧರ್ಮಾರ್ಜುನರಿಗೆ ಭೀಷ್ಮರಿಂದಲೆ ತಿಳಿಸಿಕೊಟ್ಟು, ಕೊನೆಗೆ ಭೀಷ್ಮ ಭಕ್ತಿಗಾಗಿ ಮುಕ್ತಿಯ ಪಾರಿತೋಷಕವನ್ನು ಹಿಡಿದುಕೊಂಡೇ ನಿಂತಿದ್ದಾನೆ ಕೃಷ್ಣ.

ಕೊಲ್ಲುವವರು ಯಾರು ? ಸಾಯುವವರು ಯಾರು ? ಯಂತ್ರಿ ಕೃಷ್ಣ. ಅಖಿಲ ಚರಾಚರಗಳು ಯಂತ್ರರೂಪಗಳು ಎಂದು ಭೀಷ್ಮನು ವೇದಾಂತದ ಉಚ್ಚವಟ್ಟದ ಮೇಲೆ ನಿಂತು ಪಾರ್ಥನಿಗೆ ಇನ್ನೊಂದು ಬಾರಿ ಗೀತಾತತ್ತ್ವವನ್ನು ಜ್ಞಾಪಿಸುತ್ತಾನೆ. ಮುಂದೆ ಶಿಖಂಡಿಯನ್ನು ಮುಂದೆ ಮಾಡಿ, ಕೃಷ್ಣನ ಪ್ರಚೋದನೆಯ ಮೇರೆಗೆ ಪಾರ್ಥನು ಅಂಬುಗಳಿಂದ ಭೀಷ್ಮನ ಮೈಯನ್ನು ಮುಸುಕಿ ಬಿಡುತ್ತಾನೆ. ಶರಪಂಜರದ ಮೇಲೆ ಪವಡಿಸಿದ ಭೀಷ್ಮನು ಧರ್ಮರಾಯನಿಗೆ ನುಡಿಯುತ್ತಾನೆ !

'ಧರ್ಮಜನೆ, ನಿನಗೆ ಅಪವಾದ ಪಾತಕವಿಲ್ಲ. ನನ್ನ ಸಾವಿನ ಸುಕೃತಕೆ ಈ ದಯಾಂಬುಧಿ ಕೃಷ್ಣ ಹೊಣೆ.' ಒಬ್ಬರನ್ನು ಸಲಹುವುದು, ಒಬ್ಬನನ್ನು ಸದೆವುದು—ಇದರಲ್ಲಿ ಆತನಿಗೆ ಕರುಣಾಸ್ಪದತೆಯೆಂಬುದೆ ಇಲ್ಲ. ಆತನ ಲೀಲೆಗಾಗಿಯೇ ಉದಯಿಸಿದ ಜಗವಿದು. ದ್ರೋಣನಿಗೂ ಇದರ ಅರಿವಿದೆ:

> ಇದು ಮುರಾರಿಯ ಲೀಲೆಗೋಸುಗ
> ಉದಯಿಸಿದ ಜಗ ವಿದರೊಳೊಬ್ಬನ
> ಸದೆವನೊಬ್ಬನ ಹಿಡಿದು ಸಲಹುವನೊಬ್ಬನೊಬ್ಬನಲಿ
> ಇದರೊಳಾತಂಗಿಲ್ಲ ಕರುಣಾ
> ಸ್ಪದತೆ ನಿಷ್ಕಾರುಣ್ಯ ಭೂಯಂ
> ತ್ರದ ವಿನೋದದ ಕ್ರೀಡೆ ಕೃಷ್ಣನದೆಂದನಾ ದ್ರೋಣ ॥

ಆದರೆ ಆತ ಭಕ್ತ ಪ್ರಾಣನೆಂಬ ಮಾತನ್ನು ದ್ರೋಣನಿಲ್ಲಿ ಉಚ್ಚರಿಸಿರದಿದ್ದರೂ ಇದನ್ನೂ ಆತ ಬಲ್ಲವನಾಗಿದ್ದ.

# ೮. ಕೃಷ್ಣನ ಕರುಣಾನುಸಂಧಾನ

ವಿರೋಧಿಗಳನ್ನು ಮೊದಲು ಸದೆಬಡೆದು ಆಮೇಲೆ ಅವರಿಗೆ ಮೋಕ್ಷಪದವಿಯನ್ನು ನೀಡುವುದು ಶ್ರೀಕೃಷ್ಣನ ವಾಡಿಕೆ. ಅರ್ಜುನನಿಂದ ಕರ್ಣನನ್ನು ಸಂಹರಿಸ ಬಯಸಿದಾಗ ಕೃಷ್ಣನಿಗೆ ಕರ್ಣನಿಗಾಗಿ ಕನಿಕರ, ಸಹಾನುಭೂತಿಗಳಿದ್ದರೂ ನಿರ್ಮೋಹ. ಇತ್ತ ಅರ್ಜುನನಿಗೆ ಕರ್ಣನ ಬಗ್ಗೆ ಮನಕರಗುತ್ತಿರಲು ಕೃಷ್ಣನು ಒಳಗೊಳಗೆ ಕರಗಿದರೂ ಅರ್ಜುನನಿಗೆ ಬಿರುಸಾಗಿ ನುಡಿಯುತ್ತಾನೆ:

ಕರಗುವರೆ ನೀ ಸಾರು, ಭೀಮನ
ಕರೆದು ಕೊಲಿಸುವೆನೀತನನು ನಿ
ಷ್ಠುರನಲಾ ಎನ್ನದಿರು ತೆಗೆ ನಿನ್ನಿಂದ ತನ್ನಿಂದ
ಹರಿಯದಿರೆ ಹಗೆ ನಮ್ಮ ಚಕ್ರದಲರಿ ಭಟನ
ಮುರಿಯುವೆನು.........

ಎಂದು ಕಠೋರನಾಗಿ ನುಡಿಯುತ್ತಾನೆ. ನಾಲಗೆಯಿಂದ ನಿಷ್ಠುರನಾದರೂ ಈ ನಾರಾಯಣನು ಕರುಣಿ. 'ಕುರುಣೆಗೆ ಕರುಣಾವನು ಸಂಧಾನ ಮಾಣದು' ಎಂದು ಕವಿ ನುಡಿದಿರುವುದು ಅರ್ಥಪೂರ್ಣವಾಗಿದೆ. 'ಕೃಷ್ಣನ ಕರುಣೆ ಕಿರಿದಲ್ಲ'. ಭೀಮನಿಂದ ಜರಾಸಂಧನನ್ನು ಕೊಲ್ಲಿಸುವಾಗ, ದುರ್ಯೋಧನನ ವಧೆಗೈಸುವಾಗ ಅವರವರ ಮರಣದ ದುರ್ಬಲ ರಹಸ್ಯಸ್ಥಾನಗಳನ್ನು ಸೂಚಿಸುವವನೂ ಕೃಷ್ಣನೆ.

ಕುಮಾರವ್ಯಾಸನ ಕೃಷ್ಣನು ವಿನೋದದ ಮುಸುಕಿನಲ್ಲಿ ತನ್ನ ದೈವತ್ವದ ಮಾಹಾತ್ಮ್ಯೆಯನ್ನು ಮರೆಮಾಡಿ ಭಕ್ತರಿಗೊದಗಿದ ಅಸಾಧ್ಯ ಸಮಸ್ಯೆಯನ್ನು ಹೂವಿನಸರವೆತ್ತಿದಷ್ಟು ಹಗುರಾಗಿ ಬಿಡಿಸುತ್ತಾನೆ. ದೂರ್ವಾಸರು ಭಿಕ್ಷೆಗೆ ಬಂದಾಗ ದ್ರೌಪದಿಯು ತನ್ನ ಅಕ್ಷಯ ಪಾತ್ರೆಯು ಕಾರ್ಯಮಾಡದೆಂಬ ಕಳವಳದಲ್ಲಿದ್ದಾಗ ಕೃಷ್ಣನ ಚೇಷ್ಟೆ ! 'ಮೊದಲು ನನ್ನ ಹಸಿವೆಗೇನು ಮಾಡುತ್ತೀ ?' ಎಂದು ತಂಗಿಯನ್ನು ಮತ್ತಷ್ಟು ಗೊಂದಲಗೆಡಿಸಿದಾಗ—

ದೇವ ನಿಮ್ಮಯ ಹಸಿವು ಕಳೆವೊಡೆ
ಭಾವಶುದ್ಧಿಯ ಭಕುತಿ ಬೇಹುದು
ನಾವು ಚಂಚಲಚಿತ್ತರೆಂದಳು ಕಮಲಮುಖಿ ನಗುತ ॥

ತಂಗಿಯ ಮಾತಿಗೆ ತುಷ್ಟನಾದ ಅಣ್ಣದೇವನು ಅಕ್ಷಯಪಾತ್ರೆಯಲ್ಲಿದ್ದ ಪಾಕಶೇಷವನ್ನು ಸೇವಿಸಿ ತನ್ನ ಹಸಿವನ್ನು ಹಿಂಗಿಸಿಕೊಂಡು ದೂರ್ವಾಸರ ಹಾವಳಿಯನ್ನು ಪರಿಹರಿಸುವ ಪವಾಡ ವನ್ನೆಸಗುತ್ತಾನೆ. ಅದರಂತೆಯೆ ಸಂಧಿಯಾನವು ವಿಫಲವಾದಾಗ ಯುದ್ಧ ಸನ್ನಾಹದ ಉದ್ಯೋಗಕ್ಕೆ ಮೊದಲಾಗಲು ಅಲ್ಲಿ ಉದ್ಭವಿಸುವ ಪ್ರಸಂಗದಲ್ಲಿಯೂ ಇದೇ ಬಗೆಯ ವಿನೋದ ಪ್ರಜ್ಞೆಯನ್ನು ತೋರುತ್ತಾನೆ. ಆ ವಿನೋದದಲ್ಲಿಯೆ ಭಕ್ತ ಪ್ರೇಮವು ವ್ಯಕ್ತವಾಗುತ್ತದೆ. ಅರ್ಜುನನು ಬಲರಾಮ, ಯಾದವಸೇನೆ, ನಾರಾಯಣ ಸೇನೆಗಳನ್ನಾರಿಸುವುದನ್ನು ಬಿಟ್ಟು ನಿಶ್ಚಕ್ರಿಯಾದ ತನ್ನನ್ನು ಆರಿಸಿಕೊಂಡಾಗ ಶ್ರೀಕೃಷ್ಣನು 'ಏನು ಬೆಪ್ಪನೊ ನೀನು ? ನಿನಗೇ ಮೊದಲನೆಯ ಆಯ್ಕೆಯನ್ನು ಕೊಟ್ಟಾಗ ಹೀಗೆ ಮೂರ್ಖತನ ತೋರುವುದೆ ?' ಎಂದೆಲ್ಲ ನಗೆಯಾಡಿದಾಗ ಪಾರ್ಥನೂ ಅದಕ್ಕೆ ಸರಿಯಾಗಿಯೆ ಉತ್ತರ ಕೊಡುವುದನ್ನು ಹಿಂದೆ ನೋಡಿದ್ದೇವೆ.

# ೯. ಕುಮಾರವ್ಯಾಸನ ಕೃಷ್ಣನ ವೈಯಕ್ತಿಕತೆ

ವ್ಯಾಸರ ಕೃಷ್ಣ, ಪಂಪನ ಕೃಷ್ಣರಿಗಿಂತ ಕುಮಾರವ್ಯಾಸನ ಕೃಷ್ಣನು ಪ್ರತ್ಯೇಕಿತನಾಗಿ ಗುರುತಿಸಲ್ಪಡುತ್ತಾನೆ. ದ್ರೌಪದೀ ಸ್ವಯಂವರದಿಂದ ಮೊದಲಾಗಿ ಧರ್ಮರಾಯನ ಪಟ್ಟಾಭಿಷೇಕದ ವರೆಗೆ ಪಾಂಡವರನ್ನು, ದ್ರೌಪದಿಯನ್ನು, ಕುಂತೀದೇವಿಯನ್ನು ಹೆಜ್ಜೆ ಹೆಜ್ಜೆಗೆ ಹರಿಬಹೊತ್ತು, ಹರಕೆಗೈದು ಕಾಪಾಡುತ್ತ ಬರುತ್ತಾನೆ. ಧರ್ಮನಿಗೆ ಭಾವಮೈದುನನಾಗಿ ವಯಸ್ಸಿನಲ್ಲಿ ಚಿಕ್ಕವನಾಗಿ ಕಂಡರೆ ಕುಂತಿಗೆ ಸಾಮಾನ್ಯ ಸೋದರಳಿಯನಂತೆ ತೋರಿಸಿಕೊಳ್ಳುತ್ತಾನೆ. ದ್ರೌಪದಿಯ ವಸ್ತ್ರಾಕರ್ಷಣದ ಕಾಲಕ್ಕೆ ಪರಮಾತ್ಮಶಕ್ತಿಯಾಗಿ ಗೋಚರಿಸುತ್ತಾನೆ. ದೂರ್ವಾಸರು ಒಡ್ಡಿದ ಸತ್ವಪರೀಕ್ಷೆಯಲ್ಲಿ ತಂಗಿ ದ್ರೌಪದಿಗೆ ಆಪದ್ಬಾಂಧವನಾಗಿ ಸಹಾಯ ಮಾಡುತ್ತಾನೆ. ಸಂಧಿಕಾರ್ಯದ ದೌತ್ಯವಹಿಸಿ ಹಸ್ತಿನಾವತಿಗೆ ತೆರಳಿದಾಗ ರಾಜಕಾರಣ ಪಟುವಾಗಿ ಪ್ರಕಟಗೊಂಡರೆ, ಕೌರವರು ಆತನನ್ನು ಹಿಡಿದು ಕಟ್ಟಲು ವ್ಯರ್ಥಹವಣಿಸಿದಾಗ ವಿಶ್ವರೂಪಿಯಾಗಿ ಪವಾಡವೆಸಗುತ್ತಾನೆ. ಗೀತಾ ಪ್ರಸಂಗದಲ್ಲಿ ತತ್ವ ಬೋಧಕನ ಪಾತ್ರ ವಹಿಸುತ್ತಾನೆ. ಹಲವಾರು ಸನ್ನಿವೇಶಗಳಲ್ಲಿ ನಮಗೆ ಕಾರಸ್ಥಾನಿಯಾಗಿಯೂ ಕಂಡುಬರುತ್ತಾನೆ. ವಿಪ್ರವೇಷದಲ್ಲಿ ಬಂದು ರಥ ಕುಸಿದು ಅಸಹಾಯನಾದ ಕರ್ಣನಿಂದ ಆತನ ಕರ್ಣ–ಕುಂಡಲಗಳನ್ನು ದಾನವಾಗಿ ಕೇಳುವಾಗ ಶ್ರೀಕೃಷ್ಣನು ನಮಗೆ ಕರುಣಾರಹಿತನಾಗಿಯೇ ತೋರಿಬರುತ್ತಾನೆ, 'ನೀನೆಲ್ಲಿಯುವನು. ಕರ್ಣನೆಲ್ಲಿ

ಯುವನು ?' ಎಂದು ಕರ್ಣಾರ್ಜುನರಿಗೆ ವೈರಸಂಬಂಧದ ಹೊರತಾಗಿ ಇನ್ನಾವ ನಂಟೂ ಇಲ್ಲವೆಂದು ತೋರಿಸುವಾಗ ಕೃಷ್ಣನು ಸೀಮೆಯಿಲ್ಲದ ನಿಷ್ಠುರಿಯಾಗಿ ನಡೆದುಕೊಳ್ಳುತ್ತಾನೆ. ಅಂತಿಮವಾಗಿ ಕರ್ಣನ ಅಂತ್ಯವನ್ನು ಸಾಧಿಸಿದಮೇಲೆ ಪರಮ ಕರುಣಾಸಿಂಧುವೆನಿಸಿದ ಶ್ರೀಕೃಷ್ಣನು ತನ್ನ ಬಿರುದಿಗೆ ಬದ್ಧನಾಗಿ ನಡೆದುಕೊಳ್ಳುತ್ತಾನೆ; ಕರ್ಣನಿಗೆ ಮುಕುತಿಪದವನ್ನು ನೀಡುತ್ತಾನೆ.

ಸತ್ಯಧರ್ಮಗಳನ್ನು ಇಳೆಯಲ್ಲಿ ಕಾಪಾಡುವುದೆ ಭಗವಂತನ ಅವತಾರದ ಉದ್ದೇಶ. ಇದಕ್ಕಾಗಿ ಅಧರ್ಮಿಗಳ, ಅಸುರರ, ದುಷ್ಟರ ಶಿಕ್ಷೆಯಾಗಬೇಕು. ಈ ಸಂಹಾರಕಾರ್ಯವನ್ನು ತಾನೇ ಸ್ವತಃ, ಒಮ್ಮೊಮ್ಮೆ ತನ್ನ ಭಕ್ತಿಯಿಂದ ಸಾಧಿಸುತ್ತಾನೆ. ಇಲ್ಲಿ ಶಿಶುಪಾಲನನ್ನು ಶ್ರೀಕೃಷ್ಣನು ಸ್ವತಃ ಕೈಯಾರೆ ಸದೆದರೆ, ಕೌರವರ ಸಂಹಾರವನ್ನು ಭೀಮಾರ್ಜುನರಿಂದ ಸಾಧಿಸುತ್ತಾನೆ; ಜರಾಸಂಧನನ್ನು ಭೀಮನಿಂದ ಕೊಲ್ಲಿಸುತ್ತಾನೆ. ಜಯದ್ರಥನ ವಧೆಗಾಗಿ ಪಾರ್ಥನು ಪ್ರತಿಜ್ಞೆತೊಟ್ಟಾಗ ಅದು ಈಡೇರುವ ಸಂಭವ ಕಾಣದಿರುವಾಗ ತನ್ನ ಸುದರ್ಶನದಿಂದ ಸೂರ್ಯನನ್ನು ಮರೆಮಾಡುತ್ತಾನೆ. ಇನ್ನೇನು ಕತ್ತಲೆಯಾಯಿತು. ಪಡುವಣ ರವಿ ಸರಿದನೆಂದು ಉತ್ಸಾಹಿಸಿ ಇನ್ನು ತಾನು ಚಿರಂಜೀವಿಯೆಂಬ ಹರ್ಷಾತಿರೇಕದಿಂದ ಹೊರಬರಲು ಕೃಷ್ಣನು—'ಅಹಿತನ ತಲೆಗೆ ಹರ ಹಿಡಿವಂಬು ತೊಡು' ಎಂದು ನುಡಿಯುತ್ತಾನೆ. 'ದೇವ, ರವಿಯಸ್ತಮಿಸಿದನು– ನೀವಾವುದುಚಿತವ ಕಂಡಿರಿ ?' ಎಂದು ಪಾರ್ಥನು ಪ್ರಶ್ನಿಸಲು, 'ಈ ವಿರೋಧಿಯು ಕೆಡಹು' ಸೂರ್ಯನ ನಾವು ತೋರಿಸಿಕೊಡುವೆವು' ಎಂದು ಹೇಳಿ, ಸುದರ್ಶನವನ್ನು ಹಿಂತೆಗೆದುಕೊಳ್ಳಲು ಸೂರ್ಯನು ಯಥಾವತ್ತಾಗಿ ಪ್ರಕಾಶಿಸತೊಡಗಲು ಪಾರ್ಥನು

ಪಾಶುಪತಾಸ್ತ್ರ ಹೂಡಿ ಜಯದ್ರಥನನ್ನು ಸಂಹರಿಸುತ್ತಾನೆ. 'ನಿಮಿತ್ತ ಮಾತ್ರಂ ಭವ ಸವ್ಯ-ಸಾಚಿ' ಎಂದು ಶ್ರೀಕೃಷ್ಣನು ನುಡಿದದ್ದು ನಿಜವಾಗುತ್ತದೆ. ಕೌರವ ಪಕ್ಷದ 'ಸರ್ವನಾಶದಲ್ಲಿ ಶ್ರೀಕೃಷ್ಣನೆ ಸಂಹಾರಕನಾಗಿ ಭೀಮಾರ್ಜುನರನ್ನು ನಿಮಿತ್ತ ಪಾತ್ರರನ್ನಾಗಿ ಮಾಡಿಕೊಳ್ಳುತ್ತಾನೆ. ವಿಶ್ವಂಭರ ಬ್ರಹ್ಮವು ಪಂಚ-ಪಾಂಡವರ ಪಂಚಪ್ರಾಣ ರಕ್ಷಣೆಗಾಗಿ ಶ್ರೀಕೃಷ್ಣನ ಗುಣಾಕಾರವನ್ನೂ ತಾಳಿನಿಂತಂತಿದೆ.

ಹೀಗಿರುವುದರಿಂದಲೆ ದುರ್ಯೋಧನಾದಿಗಳಿಗೆ ಪಾಂಡವರಿಗಿಂತ ಶ್ರೀಕೃಷ್ಣನೆ ಹೆಚ್ಚಿನ ವೈರಿಯಾಗಿದ್ದಾನೆ. ಇದನ್ನೆ 'ಮುರಹರನ ಮನವ ಬಲ್ಲೆ' ದುರ್ಯೋಧನನು ಆಡಿಯೂ ತೋರಿದ್ದಾನೆ. ಆದರೆ 'ಮಯೈವ ತೇ ನಿಹತಾಃ ಪೂರ್ವಮೇವ' ಎಂದು ಶ್ರೀಕೃಷ್ಣನು ಸಕಲ ಕೌರವರ ಸಂಹಾರಕ್ಕೆ ತಾನೆ 'ಉತ್ತರಾಯಿ'ಯೆಂಬ ಮಾತನ್ನೂ ಆಡಿತೋರಿಸಿದ್ದಾನೆ. ಇದು ದೈತ್ಯಗುಣದ ಸಂಹಾರವಲ್ಲದೆ ದೈತ್ಯ ಸಂಹಾರವಲ್ಲ. ಈ ದೈತ್ಯತ್ವವು ವ್ಯಕ್ತಿಗಳಿಗೆ ಪ್ರಾಪ್ತವಾದುದು ಅವರವರ ದೈವದಿಂದಾಗಿ. ಆದುದರಿಂದ ಶ್ರೀಕೃಷ್ಣನಿಗೆ ಸ್ವಂತದ್ವೇಷವೆಂಬುದು ಇದರಲ್ಲಿಲ್ಲ. ದುರ್ಯೋಧನನಿಗೆ ಆತನ ದೈವದ ದಾಯವಾಗಿ ಪ್ರಾಪ್ತವಾಗುತ್ತದೆ ಅಂತಿಮನಾಶ.

ಶ್ರೀಕೃಷ್ಣನ ಪಾತ್ರವು ಸಂಕೀರ್ಣತೆಯಿಂದ ಕೂಡಿದೆ. ತೋರಿಕೆಗೆ ವಿರುದ್ಧವೆನಿಸುವ ಗುಣಗಳು ಆತನಲ್ಲಿ ಕಂಡುಬರುತ್ತವೆ. ವ್ಯಾಸರ ನಿರ್ಮಿತಿಯೆ ಹೀಗೆ ಭಾಗವತದ ಶ್ರೀಕೃಷ್ಣನೆ ಬೇರೆ ಎನಿಸುತ್ತಾನೆ. ಅಲ್ಲಿ ಮೂಡಿರುವುದು ಶ್ರೀಕೃಷ್ಣನ ಪೌರಾಣಿಕ

ಪವಾಡಗಳ ಚಿತ್ರ. ಶಿಶುವಾಗಿ ಪೂತನಿಯ ಸಂಹಾರ ಮಾಡುವುದರಿಂದ ಮೊದಲಾಗಿ, ಬಾಲಗೋಪಾಲನಾಗಿ ಗೋಪಿಯರ ಮನೆಗಳಲ್ಲಿ ಬೆಣ್ಣೆ ಮೊಸರುಗಳನ್ನು ತಿಂದು ಬಾಲ ಲೀಲೆಗಳನ್ನೆ ಮೆರೆದರೂ ತಾಯಿಗೆ ಬಾಯಲ್ಲಿ ಹದಿನಾಲ್ಕು ಲೋಕಗಳನ್ನೆ ತೋರುವ ಅದ್ಭುತ ಲೀಲಾ ಸಾಮರ್ಥ್ಯವನ್ನೂ ತೋರುತ್ತಾನೆ. ಗೋವರ್ಧನ ಗಿರಿಯನೆತ್ತಿ ಇಂದ್ರನೊಂದಿಗೆ ಸೆಣಸುವ ಸಾಮರ್ಥ್ಯ, ಕಾಲಿಯಾಮರ್ದನದ ಚೋದ್ಯ, ಕಂಸವಧೆಯ ಕೃತ್ಸ್ನ ಬಲಿಗಳನ್ನು ಪ್ರದರ್ಶಿಸಿದ ಮುರಾರಿಯು ಮುರಲೀನಾದದಿಂದ ಗೋಪಿಯರನ್ನು ಮುಗ್ಧಗೊಳಿಸುತ್ತಾನೆ. ರಾಸಕ್ರೀಡೆಯಲ್ಲಿ ಓಲಾಡಿ ರಾಜನ ವೃತ್ತಿಯನ್ನು ತೋರಿದಂತೆ ಕಂಡರೂ ರಾಧಾ–ಮಾಧವ ಪ್ರೇಮದ ದೈವೀಭಾವವನ್ನು ಅದರಲ್ಲಿ ಪ್ರಕಟಮಾಡುತ್ತಾನೆ.

ಕುರುಕ್ಷೇತ್ರದ ಶ್ರೀಕೃಷ್ಣನು ಮುರಲಿಯನ್ನು ತ್ಯಜಿಸಿ ಪಾಂಚಜನ್ಯವನ್ನು ಧರಿಸುವ ಮೊದಲು, ತನ್ನ ಸಹಾಯವನ್ನು ಕೇಳಬಂದ ಕೌರವನಿಗೆ ಹೇಳುತ್ತಾನೆ :

ಹಸುಳೆತನ ಮೊದಲಾಗೆ ಬಲು ರ
ಕ್ಕಸರೊಡನೆ ತಲೆಯೊತ್ತಿ ರಣದಾ
ಯಸವ ಸೈರಿಸಿ ಹೊಯ್ದುಕೊಂಡೆವು ಕೋಟಿ ದಾನವರ

ಈ ಕೋಟಿ ದಾನವ ಸಂಹಾರ ನಡೆದುದು ಶ್ರೀಕೃಷ್ಣ ಲೀಲೆಗಳ ಒಂದು ಭಾಗವೆ. 'ದೈತ್ಯ ಸಹಸ್ರಕೋಟಿಯನಿರಿದು, ಭೂ ಭಾರವ ನಿಳುಹಿ ನಿರ್ಜರರ ದುಗುಡವನು ಹರಿದು ಹಾಯಿಕಿ, ಭಕ್ತರನು ನೆರೆ ಮೆರೆಯಲೋಸುಗ ಜನಿಸಿದನು ಹರಿ' ಎಂದು ಸನತ್ಸುಜಾತನು ಧೃತರಾಷ್ಟ್ರನಿಗೆ ತಿಳಿಯ ಹೇಳುತ್ತಾನೆ. ಮುಂದೆ ಮಹಾಭಾರತ

ದಲ್ಲಿ ಯೋಗೇಶ್ವರನೆನಿಸಿ, ಸಿದ್ಧ ಧರ್ಮದ ಮೂರ್ತಿಯಾಗಿ, ಸೃಷ್ಟಿ–ಸ್ಥಿತಿ–ಸಂಹಾರ ಸಂಕಲ್ಪಗಳ ರಹಸ್ಯಗಳನ್ನು ಬಲ್ಲವನಾಗಿ ತನ್ನ ಪರಮ ಸಂಕಲ್ಪದಂತೆ ಕುರುಕ್ಷೇತ್ರ ನಾಟಕವನ್ನು ಕೊನೆಗೊಳಿಸುತ್ತಾನೆ.

ಕದನದಲ್ಲಿ ಕೈಯಾರೆ ದೈತ್ಯರ ।
ಸದೆದು ಭೂಭಾರವನು ಪರಹ ।
ಸ್ತದಲಿ ಕಟ್ಟಿಸಿಕೊಟ್ಟ ಭಾಷೆಯನುತ್ತರಾಯೆನಿಸಿ ॥
ನದಿಯನಂದನನು ಪರಾನಂ ।
ದದಲಿ ಸೇರಿಸಿ ಪರಮ ಪರಿತೋ ॥
ಷದಲಿ ಪಯಣವ ಮಾಡಿದನು ಮುರವೈರಿ ನಿಜಪುರಿಗೆ॥

ಎಂದು ಕವಿ ಒಂದೇ ಪದ್ಯದಲ್ಲಿ ಮುರವೈರಿಯ ಅವತಾರದ ಉದ್ದೇಶವನ್ನು ಸಂಗ್ರಹಿಸಿದ್ದಾನೆ. ಆದರೆ ಇಂತಹ ಮಹಾತ್ಮ ಕೊನೆಯಲ್ಲಿ ಒಬ್ಬ ಕ್ಷುಲ್ಲಕ ವ್ಯಾಧನಿಂದ ಹತನಾಗಿ ತನ್ನ ಜೀವಿತ ಕಾರ್ಯವನ್ನು ಉಪಸಂಹರಿಸುತ್ತಾನೆ. ಇದೂ ಆತನ ಸಂಕಲ್ಪವೆ. ಇನ್ನು ತಾನು ಮಾಡುವುದು ಏನೂ ಶೇಷವಾಗಿಲ್ಲವೆಂದು ತಿಳಿದು ಎಲ್ಲಿಯೊ ಹೋಗಿ ಹೇಗೋ ಮೃತನಾದರೂ ಇಳೆಯ ಅಧರ್ಮವನ್ನು ಇಲ್ಲವಾಗಿಸಿರುತ್ತಾನೆ. ಇಚ್ಛಾವತಾರಿಯಾದರೂ ಶ್ರೀಕೃಷ್ಣಾವತಾರದಲ್ಲಿ ಆತನೂ ಸಾಮಾನ್ಯರಂತೆ ಬೇಕಾದಷ್ಟು ಅಪಾಯುಗಳನ್ನೆದುರಿಸುತ್ತಾನೆ. ಸಮತೆ, ಸಾತ್ವಿಕತೆಗಳಿಂದ ಸಮಾಜ ಕ್ಷೇಮವನ್ನು ಸಾಧಿಸುತ್ತಾನೆ.

ಹೀಗೆ ಶ್ರೀಕೃಷ್ಣನದು ಒಂದು ಜಟಿಲವಾದ, ಅಗಮ್ಯವಾದ, ಸಂಕೀರ್ಣ ಪಾತ್ರವಾಗಿದೆ. ಬಾಲನಾಗಿಯೂ ಪ್ರಬುದ್ಧ, ದೇವನಾಗಿಯೂ ಮಾನವೀಯತೆಯುಳ್ಳವ, ಕಠಿಣನಾಗಿ ತೋರಿಯೂ ಕರುಣಿ.

ಶ್ರೀ ಕೃಷ್ಣನು ಐತಿಹಾಸಿಕ ವ್ಯಕ್ತಿಯೇ ? ಇದ್ದಿರಬೇಕೆಂದು ಇತಿಹಾಸಜ್ಞರ ಅಭಿಪ್ರಾಯ. ಕುರುಬ, ಹಟ್ಟಿಕಾರ, ತುರುಪ, ಗೋವಳಿಗನಾಗಿ, 'ದನಗಾಹಿ' ಎನಿಸಿದ್ದರೂ ಅವತಾರ ಪುರುಷನಾಗಿ ಮೆರೆದುದು ಇತಿಹಾಸ ಕಕ್ಷೆಯನ್ನು ಮೀರಿದ ಮಾತು. 'In Mahabharata Krishna is represented both as historical character and the Avtar' ಎಂದು ಶ್ರೀ ಅರವಿಂದರು 'Essays on the Geeta' ಎಂಬ ಗ್ರಂಥದಲ್ಲಿ ನುಡಿದಿದ್ದಾರೆ. ಭಾಗವತ, ಹರಿವಂಶಗಳಲ್ಲಿ ನಿರೂಪಿತನಾದ ಶ್ರೀಕೃಷ್ಣ ಚರಿತ್ರೆ ಆಧ್ಯಾತ್ಮಿಕ ಸಂಕೇತದಿಂದ ಕೂಡಿದೆಯೆಂದು ಅವರು ಅಭಿಪ್ರಾಯಪಟ್ಟಿದ್ದಾರೆ ಕೃಷ್ಣಾವತಾರವೆಂದರೆ 'ಮಾನವತೆಯಲ್ಲಿ ಆವಿಷ್ಕಾರ ಹೊಂದಿದ ದೈವಿಕತೆ' (Manifestation of the Divine in humanity) ಶ್ರೀಕೃಷ್ಣನ ಆಧ್ಯಾತ್ಮದ ಉನ್ನತಿ 'Over mind' ಎಂದರೆ ಅಧಿಮನದ ಮಟ್ಟವೆಂದೂ ಶ್ರೀ ಅರವಿಂದರು ಕರೆದಿದ್ದಾರೆ. ಶ್ರೀಕೃಷ್ಣನು ಮಾನವಕುಲದೊಂದಿಗೆ ವ್ಯವಹರಿಸುವ ದೈವೀಶಕ್ತಿಯ ಸಂಕೇತವಾಗಿದೆ.

.ನರ–ನಾರಾಯಣ ಸಂಕೇತವೆಂದರೆ ಮಾನವ ದೈವೀ ಆತ್ಮಗಳ ಸಾಹಚರ್ಯವಾಗಿದೆ. ಈ ಸಂಕೇತವು ಉಪನಿಷತ್ತಿನಲ್ಲೂ ಮರದ ಮೇಲಿನ ಎರಡು ಹಕ್ಕಿಗಳ ಮೂಲಕ ವ್ಯಕ್ತವಾಗಿದೆ.

ನರನು ಸಾಮಾನ್ಯ ಸಾಧಕನ ಪ್ರತಿನಿಧಿಯಾದರೆ ನಾರಾಯಣನು ತತ್ಸಾಧಕನ ಸಾರಥ್ಯವಹಿಸಿ ಗುರಿಯತ್ತ ನಡೆಸುತ್ತಾನೆ.ಕುರುಕ್ಷೇತ್ರವು ಜೀವನದ ಜಡಶಕ್ತಿಗಳ ಹೋರಾಟದ ದ್ಯೋತಕವೇ ಆಗಿದೆ. ಪ್ರತಿಯೊಬ್ಬ ನರನ ಹೃದ್ರಂಗದಲ್ಲಿ ಒಂದೊಂದು ಕುರುಕ್ಷೇತ್ರ ನಡೆದೇ ಇರುತ್ತದೆ. Arjuna and Krishna this human and this divine stand together... as fighter and holder of the reigns in the clamorous field in the midst of hurting shafts in the chariot of battle–' ಎಂದು ಶ್ರೀ ಅರವಿಂದರು 'ಗೀತಾ ಪ್ರಬಂಧಗಳಲ್ಲಿ' ನುಡಿದಿದ್ದಾರೆ. ಇದೇ ಸಂದರ್ಭದಲ್ಲಿ ಗೀತಾಬೋಧಕನಾದ ಶ್ರೀಕೃಷ್ಣನ ಅವತಾರ ಪಾತ್ರವನ್ನು ಕುರಿತು ಅವರು–

"The teacher of the Gita is therefore not only the God in man who unveils Himself in the world of knowledge,but the God in man who moves over whole world of action by and for whom all our humanity exists of struggles and labours towards whom all human life travels and progresses. He is the secret Master of works and sacrifice and the friend of the human peoples"— ಎಂದು ಹೇಳಿದ್ದಾರೆ.

ಗೀತೋಪದೇಶಕನಾದ ಶ್ರೀಕೃಷ್ಣನು ನರನಲ್ಲಿಯ ಹೃದಯಸ್ಥ ಈಶ್ವರನಾಗಿ ಜ್ಞಾನಜಗತ್ತಿನಲ್ಲಿ ಪ್ರಕಟಗೊಳ್ಳುವುದಲ್ಲದೆ, ಈ ಕರ್ಮಮಯ ಜಗತ್ತನ್ನು ಮುನ್ನಡೆಯಿಸುತ್ತಾನೆ. ಈ ಮಾನವ ಕುಲದ ಜೀವಿತೋದ್ದೇಶವೆ ಆತನಾಗಿದ್ದಾನೆ. ಆತನಿಗಾಗಿಯೆ ಮಾನವ ಕುಲವು ಅಸ್ತಿತ್ವ ತಾಳಿದೆ. ಆತನಿಗಾಗಿಯೆ ಮಾನವ ಜೀವನದ ಪ್ರಯಾಣ ಹಾಗೂ ಪ್ರಗತಿ. ಭಗವಾನ್ ಕೃಷ್ಣನು ಕರ್ಮಯಜ್ಞಗಳ ರಹಸ್ಯಪ್ರಭುವಾಗಿದ್ದಾನೆ; ನರಕುಲದ ಸಖನಾಗಿದ್ದಾನೆ– ಎಂಬುದು ಶ್ರೀ ಅರವಿಂದರ ಅಭಿಪ್ರಾಯ.

# ೧೦. ಪಂಪ-ಲಕ್ಷ್ಮೀಶರ ಕೃಷ್ಣ

ಪಂಪ ಕವಿಯೂ ಕೃಷ್ಣನ ಪಾತ್ರಕ್ಕೆ ಘನತೆಯನ್ನು ತಂದು ಕೊಟ್ಟಿದ್ದಾನೆ. ಶ್ರೀಕೃಷ್ಣನು ಪುರುಷೋತ್ತಮನು. ಆದರೆ, ಜೈನ ಪರಂಪರೆಯ ಹಿನ್ನೆಲೆಯಲ್ಲಿ, ಆತ ಸರ್ವತಂತ್ರಸ್ವತಂತ್ರನಾಗಿಲ್ಲ. ಅರ್ಜುನ ಶ್ರೀಕೃಷ್ಣರರು ಸಖ್ಯ ಸಂಬಂಧ. ಇಷ್ಟೇ ಅಲ್ಲ, ಪಂಪನ ಕೃಷ್ಣ ವಿಕ್ರಮಾರ್ಜುನನ ರಕ್ಷಣಾಮಂತ್ರಿಯಂತಿದ್ದಾನೆ. ಯಾವಾಗಲೂ ಅರ್ಜುನನ ಬೆನ್ನಿಗೇ ನಿಂತುಕೊಂಡು ಅವನನ್ನು ಗೆಲುವಿನತ್ತ ನಡೆಸಿಕೊಂಡು ಹೋಗುತ್ತಾನೆ. ಅರ್ಜುನನು ಕವಿಯ ಕಣ್ಣಲ್ಲಿ ಅರಿಕೇಸರಿಯೇ ಆಗಿರುವುದರಿಂದ ಬಹಳಷ್ಟು ಕುಶಲತೆ ಯಿಂದ, ಜಾಗರೂಕತೆಯಿಂದ ವಿಕ್ರಮಾರ್ಜುನನ ವಿಜಯಕ್ಕೆ ಶ್ರೀಕೃಷ್ಣನನ್ನು ಸಾರಥಿ ಮಾಡಿ ದುಡಿಸುತ್ತಾನೆ. ರಾಯಭಾರ ಪ್ರಸಂಗದಲ್ಲಿ ಪಂಪನು ಕೃಷ್ಣನನ್ನು ಒಳ್ಳೆಯ ಮುತ್ಸದ್ದಿಯಂತೆ ಚಿತ್ರಿಸಿದ್ದಾನೆ. ತನ್ನ ಚಾಣಾಕ್ಷತನದಿಂದ ಶ್ರೀಕೃಷ್ಣನು ತನ್ನ ಸೋದ ರತ್ತೆಯ ಮಕ್ಕಳಾದ ಪಾಂಡವರ ಮನ್ನಣೆಗೆ ಪಾತ್ರನಾಗಿ ತನ್ನ ಭಾಗದ ಕಾರ್ಯವನ್ನು ನೆರವೇರಿಸುತ್ತಾನೆ. ಆದರೆ ದೌತ್ಯವಹಿಸಿ ಬಂದ ಶ್ರೀಕೃಷ್ಣನು ಅರ್ಜುನನ ಪರಾಕ್ರಮವನ್ನು ವರ್ಣಿಸುತ್ತ, ಚಳುಕ್ಯಕುಳತಿಳಕನಪ್ಪ ವಿಜಯಾದಿತ್ಯಂಗೆ, ಗೋವಿಂದರಾಜಂ ಮುಳಿಯೆ ತಳರದೆ ಪೆರಗಿಕ್ಕೆ ಕಾದ ಶರಣಾಗತ ಜಳನಿಧಿಯ ಪೆಂಪುಮಂ ಗೊಜ್ಜಿಗನೆಂಬ ಸಕಲ ಚಕ್ರವರ್ತಿ ಬೆಸಸೆ, ದುಂಡುಮಂದ ಮಹಾಸಾಮಂತರಂ ಮರಲಿರಿದು ಗೆಲ್ದ ಸಾಮಂತ ಚೂಡಾಮಣಿ

ಬೀರವುಂ "ಎಂದೆಲ್ಲ ಹೇಳುವದು ಥಟ್ಟನೆ ಓದುಗರ ಗಂಟಲನ್ನು ಹಿಡಿದಂತಾಗುತ್ತದೆ" ( ಪು. ೩೭. ಮಹಾಭಾರತ ಸಮೀಕ್ಷೆ-ನ-ಸುಬ್ರಹ್ಮಣ್ಯಂ.)

ಅಂತೂ ಪಂಪನ ವಿಕ್ರಮಾರ್ಜುನಗಿರುವ ಪ್ರಾಶಸ್ತ್ಯ ಪಂಪನ ಕೃಷ್ಣನಿಗಿಲ್ಲ. ಕೃಷ್ಣಪಾರಮ್ಯವನ್ನು ಕುರಿತ ಅದ್ಭುತ ಕಥೆಗಳು ಪಂಪನಿಗೆ ಒಪ್ಪಿಗೆಯಿಲ್ಲ. ಕೃಷ್ಣಮಾಹಾತ್ಮ್ಯೆಯನ್ನು ಸಾರುವ ಅಕ್ಷಯಾಂಬರದ ಸನ್ನಿವೇಶ, ದೂರ್ವಾಸಾತಿಥ್ಯ, ವಿಶ್ವರೂಪ ದರ್ಶನ, ಮೊದಲಾದವುಗಳನ್ನು ಪಂಪ ಎತ್ತಿಕೊಳ್ಳುವುದಿಲ್ಲ. ಗೀತೋಪದೇಶವು ಪಂಪನಿಗೆ ಅಪ್ರಸ್ತುತ. ಅರ್ಜುನನೇ ಕಥಾ ನಾಯಕ. ಅವನ ವಿಕ್ರಮದ ವರ್ಣನೆಯು 'ವಿಕ್ರಮಾರ್ಜುನ ವಿಜಯ'ಕ್ಕೆ ಪ್ರಕೃತವಾದ ಭಾಗ. ಕೊನೆಯಲ್ಲಿ 'ಛಲದೊಳ್ ದುರ್ಯೋಧನಂ, ನನ್ನಿಯೊಳಿನತನಯಂ, ಗಂಡಿನೊಳ್ ಭೀಮ ಸೇನಂ, ಬಲದೊಳ್ ಮದ್ರೇಶನ್, ಅತ್ಯುನ್ನತಿಯೊಳಮರಸಿಂಧೂದ್ಭವಂ, ಸಾಹಸದ ಮಹಿಮೆಯೊಳ್ ಫಲ್ಗುಣಂ, ಧರ್ಮದೊಳ್ ನಿರ್ಮಲಚಿತ್ತಂ ಧರ್ಮಪುತ್ರಂ-ಎಂಬ ಖ್ಯಾತ ನಾಮಾವಳಿಯಲ್ಲಿ ಕೃಷ್ಣನಿಗೆ ಸ್ಥಾನವೆ ಇಲ್ಲ !

ಇನ್ನು ಲಕ್ಷ್ಮೀಶನಿಗೆ ಕುಮಾರವ್ಯಾಸನಷ್ಟೆ ಅಪಾರ ಭಕ್ತಿ ಕೃಷ್ಣನಲ್ಲಿ. 'ತಿಳಿಯ ಹೇಳುವೆ ಕೃಷ್ಣಕಥೆಯನು' ಎಂದು ಲಕ್ಷ್ಮೀಶನು ತನ್ನ ಭಾರತವು ಕೃಷ್ಣಕಥೆಯೆಂದು ತಿಳಿದು ಕೃಷ್ಣನೆ ಅದರ ನಾಯಕನೆಂದು ಚಿತ್ರಿಸಿರುವಂತೆ ಲಕ್ಷ್ಮೀಶನಿಗೂ ಕೃಷ್ಣನೆ ತನ್ನ ಕಥಾನಾಯಕ. 'ಪುಣ್ಯಮಿದು ಕೃಷ್ಣಚರಿತಾಮೃತಂ' ಎನ್ನುತ್ತಾನೆ. ಈ ವಿಷಯವಾಗಿ ಡಾ. ವಾಮನ ಬೇಂದ್ರೆ ಅವರು ಹೀಗೆ ನುಡಿಯುತ್ತಾರೆ:

'ತನ್ನ ಶರಣರ ಜೀವನವೆ ತನಗೆ ಜೀವನಂ' ಎಂಬ ಮಾನವ ಲೀಲೆಯನ್ನು ನಡೆಸಿದ ಮತ್ತು 'ಲಕ್ಷ್ಮೀಕಾಂತನೊಲವಿಂದ ವಿಷಮಮೃತವಹುದು' ಎಂಬುದನ್ನು ಅರ್ಜುನ ಮತ್ತು ಚಂದ್ರಹಾಸ ಇವರ ಅನುಭವಕ್ಕೆ ತಂದುಕೊಟ್ಟ, ಮಹಾಮಹಿಮಾಶಾಲಿಯಾದ ಶ್ರೀಕೃಷ್ಣನೆ ಈ ಕಾವ್ಯದ ನಾಯಕನಾಗಿದ್ಧಾನೆ. ಆದುದರಿಂದಲೆ ಕನ್ನಡ ಜೈಮಿನೀ ಭಾರತವು 'ಪುಣ್ಯಮಿದು ಕೃಷ್ಣ ಚರಿತಾಮೃತಂ' ಎಂದು ಕವಿ ಲಕ್ಷ್ಮೀಶನು ತನ್ನ ಕಾವ್ಯವನ್ನು ಮುಗಿಸಿದುದು ಅರ್ಥಪೂರ್ಣವಾಗಿದೆ.' ('ಕ ಥ ನ ಕು ಶ ಲ ಕ ವಿ ಲಕ್ಷ್ಮೀಶ'–ಕ.ವಿ.ವಿ. ಉಪನ್ಯಾಸಗ್ರಂಥ ಪ್ರ. ೧೬) 'ವಿಶಾಲತರ ದೈವ ಯೋಜನೆಯ ಮುಂದೆ ಮನುಷ್ಯ ಸಂಕಲ್ಪ ಏನೂ ನಡೆಯುವುದಿಲ್ಲ. ಇದು ಭಗವಂತನ ಲೀಲೆ ಎಂಬುದು ಲಕ್ಷ್ಮೀಶನ ಶ್ರೀಕೃಷ್ಣನ ಪಾತ್ರ ಕಲ್ಪನೆ' ಎಂಬ ಕೀರ್ತಿನಾಥ ಕುರ್ತಕೋಟಿಯವರ ಮಾತನ್ನು ಇಲ್ಲಿ ನೆನೆಯಬಹುದು. (ಕುಮಾರವ್ಯಾಸ–ಜೀವನ ದರ್ಶನ ಹಾಗು ಕಾವ್ಯಸ್ವರೂಪ. ಪು. ೪೮)

ಕುಮಾರವ್ಯಾಸನ ಕೃಷ್ಣನೂ ದೇವರೇ. ದ್ರೋಣ, ಭೀಷ್ಮಾದಿಗಳು ಬಣ್ಣಿಸುವಂತೆ 'ಸರ್ವಲೋಕನಿಯಾಮಕ', 'ವಿಶ್ವಂಬರ', 'ಸಕಲ ಜೀವ ಚೇಷ್ಟಕ', ಭೂಲೋಕದ ಭಾರವನ್ನು ಇಳಿಸುವುದೆ ಆತನ ಅವತಾರದ ಉದ್ದೇಶ. ಆದರೆ ಆತನ ದೇವತ್ವದಲ್ಲಿ ಮನುಷ್ಯತ್ವವೂ ಒಳಗೊಂಡಿರುವುದರಿಂದ ಪಾಂಡವರನ್ನು ಗೆಲ್ಲಿಸಲು ಸಮರ್ಥನಾಗುತ್ತಾನೆ. ತನ್ನ ದೇವತ್ವವನ್ನು ಧಿಕ್ಕರಿಸುವವರ ಮುಂದೆ ಆತ ಚತುರತನದಿಂದ ನಡೆದುಕೊಳ್ಳುತ್ತಾನೆ. ಮಾಯೆಯನ್ನು ಕವಿಸಿ, ತಂತ್ರಗಳನ್ನು ಹೂಡುತ್ತಾನೆ.

ಪ್ರಸಂಗ ಬಂದಾಗ ಅವರನ್ನು ಹಿಂಸಿಸಲೂ ಬೇಕಾಗುತ್ತದೆ. ಹೀಗಿದ್ದೂ ಧರ್ಮಾಧರ್ಮ, ಪಾಪಪುಣ್ಯಗಳ ಜಂಜಡಕ್ಕೆ ಸಿಲುಕ ದವನು. ಆತನ ಉದ್ದೇಶವನ್ನು ಅರಿಯುವುದು ಅಜ್ಞರ ಅಳವಲ್ಲ. ತನ್ನ ಉದ್ದೇಶವನ್ನು ಈಡೇರಿಸುವಾಗ ಆತನೆದುರು ಯಾವ ಆತಂಕಗಳೂ ಅಡ್ಡ ಬರಲಾರವು. 'ಆತನೆ ನಿಂತು ಎಲ್ಲವನ್ನೂ ಮಾಡಿಸುವಾಗ ಆ ಕಾರ್ಯಗಳ ಧರ್ಮಾಧರ್ಮ ಚರ್ಚೆ ಮನುಷ್ಯರಿಗೇಕೆ ?–ಎಂಬಂತೆ ಒಂದೊಂದು ರೀತಿ ಒಬ್ಬೊಬ್ಬರನೆತ್ತಿ ಕಟ್ಟಿ ಕೆಲವು ವೇಳೆ ಸತ್ಯದಿಂದ, ಕೆಲವು ವೇಳೆ ಧರ್ಮದಿಂದ, ಕೆಲವು ವೇಳೆ ಕೇವಲ ತನ್ನ ದಿವ್ಯ ಬಲದಿಂದ— ಮಾರ್ಗ ಉಪಾಯಗಳು ಯಾವುದಾದರೂ ಸರಿಯೆ ಎಂದು— ತನ್ನ ಕೆಲಸವನ್ನು ಸಾಧಿಸು ತ್ತಾನೆ ಎಂದು 'ವಿ.ಸೀ'ಯವರು ಸಂಗ್ರಹದಲ್ಲಿ ಶ್ರೀಕೃಷ್ಣನ ಪಾತ್ರ ವೈಶಿಷ್ಟ್ಯವನ್ನು ಹೇಳಿದ್ದಾರೆ. ('ಕುಮಾರವ್ಯಾಸ ಪ್ರಶಸ್ತಿ'– 'ಭಾರತಗಳ ಶ್ರೀಕೃಷ್ಣ' ಪುಟ ೧೭೨)

## ೧೧. ಕೃಷ್ಣನ ರಕ್ಷಾಕವಚ

ಮೊದಲಿನಿಂದ ಕೊನೆಯವರೆಗೆ ಶ್ರೀಕೃಷ್ಣನು ಪಾಂಡವರನ್ನು ಕಾಪಾಡಿಕೊಂಡು ಬಂದ ರೀತಿಯನ್ನು ನೋಡಿದರೆ ಶ್ರೀಕೃಷ್ಣನಿಲ್ಲ ದಿದ್ದರೆ ಪಾಂಡವರ ಗತಿ ಏನಾಗುತ್ತಿತ್ತು? — ಎಂಬ ಪ್ರಶ್ನೆ ಎದ್ದು ನಿಂತು ಅದಕ್ಕೆ ಉತ್ತರ ಶ್ರೀಕೃಷ್ಣನಿಂದಲೆ ದೊರಕುತ್ತದೆ. 'ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ | ಧರ್ಮ ಸಂಸ್ಥಾಪನಾರ್ಥಾಯ' ಶ್ರೀಕೃಷ್ಣನಾಗಿ ಅವತರಿಸಿದ

ಭಗವಂತನು ತನ್ನನ್ನೇ ಬೆನ್ನುಬಿದ್ದ ಪಾಂಡವರನ್ನು ಕೂಡಿಕೊಂಡು ಕೌರವರೇ ಮೊದಲಾದವರನ್ನು ನಿಗ್ರಹಿಸಿ ತನ್ನ ಲೀಲೆಯನ್ನೂ ಮಹಿಮೆಯನ್ನೂ ಮೆರೆಯುತ್ತಾನೆ. ಇದೇ ಕೃಷ್ಣ ಕಥೆ. (ನೋಡಿರಿ– ಕುಮಾರವ್ಯಾಸ– 'ಜೀವನ ದರ್ಶನ ಮತ್ತು ಕಾವ್ಯಸ್ವರೂಪ' ಪುಟ ೪೭)

ದ್ರೌಪದೀ ವಿವಾಹದ ನಂತರ ತನ್ನ ಐವರು ಮಕ್ಕಳನ್ನು 'ಕೈನೆಗಹಿ ಕಮಲೋದರನ ಕೈಯಲಿ ಕೊಟ್ಟಳಾ ಕುಂತಿ'. ಅಲ್ಲಿಂದ ಪಾಂಡವರು ಶ್ರೀಕೃಷ್ಣನ ರಕ್ಷೆಯ ವಜ್ರಪಂಜರದ ಗಿಳಿಗಳಾದರು. ಅನನ್ಯಶರಣರಾಗಿ ಶ್ರೀಕೃಷ್ಣನ ಮೊರೆಹೊಕ್ಕು ಆತನ ರಕ್ಷಾಕವಚ ದಲ್ಲಿ ಸುಭದ್ರರಾಗಿ ಉಳಿದುಕೊಂಡು ಬಂದರು. 'ಏನಸಾಧ್ಯವು ಕೃಷ್ಣನೊಲಿದರಿಗೆ ?' ಎಂಬಂತಾಯಿತು.

ಖಾಂಡವ ದಹನದ ಕಾಲಕ್ಕೆ ಅರ್ಜುನನು ವಿಪ್ರವೇಷ ಧರಿಸಿದ್ದ, ಹಸಿದ ಅಗ್ನಿಗೆ ಆಹಾರ ನೀಡುವ ವಚನ ಕೊಟ್ಟುಬಿಟ್ಟಾಗ ಶ್ರೀಕೃಷ್ಣನು ಆ ವಿಪ್ರನು ಹವ್ಯವಾಹನನೆಂದು ತಿಳಿಯ ಹೇಳಿ ಅವನು ಇಂದ್ರನಿಗೆ ವೈರಿಯಾದ್ದರಿಂದ ಪಾರ್ಥನ ಹೊಣೆ ಇಮ್ಮಡಿಯಾಗಿ ಹೆಚ್ಚಿತಲ್ಲ– ಎಂದಾಗ 'ಭಂಗವೇಕೈ ಕೃಷ್ಣ ? ಭಯ ಭಂಗವುಂಟೆ ನಿನ್ನ ಕೃಪೆಯಿರಲು ?' ಎಂದು ವಿಶ್ವಾಸದಿಂದ ಪ್ರಶ್ನಿಸುತ್ತಾನೆ. ಭಕ್ತ ರಕ್ಷಕನೆಂಬ ಭಗವಂತನ ಬಿರುದು ಸಾರ್ಥಕವೆನಿಸುತ್ತದೆ.

ರಾಜಸೂಯಯಾಗದ ಕಾಲಕ್ಕೆ ಯುಧಿಷ್ಠಿರನು ಕೃಷ್ಣನನ್ನು ಬರಮಾಡಿಕೊಂಡು ಯಾಗದ ಪ್ರಸ್ತಾಪವನ್ನೆತ್ತಿದಾಗ ದಾನವರೊಡನಾಗಲಿ, ಕೌರವರೊಡನಾಗಲಿ ವಿಗ್ರಹವಿಲ್ಲವಷ್ಟೆ ಎಂದು

ಕೃಷ್ಣನು ಕೇಳಿದಾಗ— 'ದನುಜರಲಿ, ಕುರುಸೇನೆಯುಲಿ ಭಯುವೆನಗೆ ಭಾರಿಯೆ ? ನಿಮ್ಮ ಘನಪದವನಜಪಿದು ಸೀಸಕವಲೆ ತನ್ನುತ್ತ ಮಾಂಗದಲಿ' ಎಂದು ಧರ್ಮಜನು ನುಡಿಯುತ್ತಾನೆ. ಶ್ರೀಕೃಷ್ಣನ ರಕ್ಷಣೆಯ ಭರವಸೆಯಿದ್ದುದರಿಂದಲೆ ಅಲ್ಲವೆ ಇಂತಹ ಮಾತು ಧರ್ಮಜನ ಬಾಯಿಂದ ಬರುವುದು ? ಅದೇ ಮೊರೆಗೆ ಭೀಮನು ಅಜಗರದಿಂದ ಬಿಡುಗಡೆ ಹೊಂದಿದಾಗ- 'ಅಪಾಯದ ಜಲಧಿ ಗಳು ಬತ್ತುವವು ಯದುಕುಲತಿಲಕ ವೀರನಾರಾಯಣನ ಕರುಣ ದಲಿ' ಎನ್ನುತ್ತಾನೆ ಯುಧಿಷ್ಠಿರ.

ಯುದ್ಧ ಪಂಚಕವಂತೂ ಶ್ರೀಕೃಷ್ಣನು ತನ್ನ ಪಂಚ ಪ್ರಾಣ ದಂತಿದ್ದ ಪಾಂಡವರ ಬೆನ್ನಿಗೆ ರಕ್ಷೆಯಾಗಿ ನಿಂತುಕೊಂಡು ಹೆಜ್ಜೆ ಹೆಜ್ಜೆಗೆ ಅವರನ್ನು ಅಪಾಯದಿಂದ ಉಳಿಸಿ ಗೆಲುವಿನತ್ತ ಮುನ್ನ ಡೆಯಿಸಿದ ಮಹಾ ಸಾಹಸಕಾರ್ಯಗಳ ಮಹತ್ ಸಂಗ್ರಹವಾಗಿದೆ.

ದ್ರೋಣಾಚಾರ್ಯರ ಸೇನಾಪತ್ಯದಲ್ಲಿ ಭೀಮನಿಗೂ ಭಗ ದತ್ತನಿಗೂ ಭಯಂಕರವಾದ ಯುದ್ಧ ನಡೆಯುತ್ತದೆ. ಭಗದತ್ತನ ಸುಪ್ರತೀಕ ಗಜವು ಪಾಂಡವರ ಸೇನೆಯನ್ನು ದಿಕ್ಕು ದಿಕ್ಕಿಗೆ ಚದುರಿ ಸಿತು. ಭೀಮನು ಕಲಿಯಾಗಿ ಕರಿಯೊಡನೆ ಹೋರಾಡುತ್ತಾನೆ. ಆನೆಯ ಮೇಲೆ ಸುರಿಯುವ ಶರಗಳು ಗಿರಿಯ ಮುತ್ತಿದ ಮಿಂಚು ಹುಳುವಿನ ಹೊರಳಿಯಂತೆ ಮೆರೆದವು. ಗಜದ ಹೋರಾಟದಲ್ಲಿ ಭೀಮನು ಜರ್ಝರಿತನಾಗುತ್ತಾನೆ. ಪಾಂಡವ ಸೇನೆ ಒಂದೇ ಸಮನೆ ಕರಗ ಹತ್ತಿತು. ಶ್ರೀಕೃಷ್ಣನು ಪರಿಸ್ಥಿತಿಯನ್ನರಿತು ಪಾರ್ಥನನ್ನು ಸುಪ್ರತೀಕದತ್ತ ಕರೆದೊಯ್ಯುತ್ತಾನೆ. ಭಗದತ್ತನಿಗೂ ಪಾರ್ಥನಿಗೂ ಘೋರ ಕಾಳಗ ನಡೆಯುತ್ತದೆ. ಭಗದತ್ತನು

ರೊಚ್ಚಿಗೆದ್ದು ಕೋಟಿ ಸೂರ್ಯ ರಶ್ಮಿಯಂತೆ ಹೊಳೆವ ತನ್ನ ಅಸ್ತ್ರವನ್ನು ಹೊರಗೆ ತೆಗೆಯುತ್ತಾನೆ. ಆ ಅಂಕುಶಾಸ್ತ್ರವು ಕಾಳೋರಗನ ಕುಡಿ ನಾಲಗೆಯಂತೆ ಆ ಭಟನ ಮುಷ್ಟಿಯಲ್ಲಿ ಹೊಳೆಯಿತು. ಅಂಕುಶಾಸ್ತ್ರವು ಅರ್ಜುನನ ಮೇಲೆ ಎಸೆಯಲ್ಪಟ್ಟ ಕೂಡಲೆ ಪಾಂಡವರ ಸಮಗ್ರ ಸೇನೆ ತಲ್ಲಣಿಸಿ ಹೋಗುತ್ತದೆ. ಆ ಕ್ಷಣಕ್ಕೆ ಶ್ರೀಕೃಷ್ಣನು ತನ್ನ ವಕ್ಷಸ್ಥಳವನ್ನು ಚಾಚಲು ಅಂಕುಶಾಸ್ತ್ರವು ಅಲ್ಲಿ ಕೌಸ್ತುಭಮಣಿಯಾಗಿ ಮೆರೆಯುತ್ತದೆ. ಆಗ ಎಲ್ಲರ ಭೀತಿಯೂ ಮಾಯವಾಗಿ ಹರುಷದ ಸೆರೆಗೆ ಬಿಡುಗಡೆಯಾಗುತ್ತದೆ. ಆದರೆ ಪಾರ್ಥನಿಗೆ ಮಾತ್ರ ತನ್ನಿಂದ ಆ ಅಂಕುಶಾಸ್ತ್ರವನ್ನು ಉಪಸಂಹರಿಸಲಿಕ್ಕಾಗದೆ ಶ್ರೀಕೃಷ್ಣನು ಅಡ್ಡಬಂದುದಕ್ಕೆ ಅಹಂಕಾರವು ಹೆಡೆಯೆತ್ತಿ 'ಮುರಾಂತಕನು ಸಾರಥಿತನಕೆ ಅಲಸಿದನೆ? ಹಾಗಾದರೆ ತನಗೇ ಸೂತತನವಿರಲಿ' ಎಂದು ದುಗುಡ ತಳೆಯುತ್ತಾನೆ. ಅರ್ಜುನನ ಮನಸ್ಸನ್ನರಿತ ಶ್ರೀಕೃಷ್ಣನು ಭಗದತ್ತನ ಅಂಕುಶಾಸ್ತ್ರದ ಮರ್ಮ, ರಹಸ್ಯಗಳನ್ನು ವಿವರಿಸುತ್ತಾನೆ. ಆ ಅಂಕುಶಾಸ್ತ್ರವು ಪೂರ್ವದಲ್ಲಿ ವರಾಹನ ದಾಡೆಯಾಗಿತ್ತು. ಆ ಆಯುಧವನ್ನು ಪಾರ್ಥನು ಉಪಸಂಹರಿಸುವುದಿರಲಿ.ಅದನ್ನು ಕಣ್ಣೆತ್ತಿ ನೋಡಿದ್ದರೆ ಸಾಕು ಎವೆಗಳು ಸೀದುಹೋಗುತ್ತಿದ್ದವು. ರುದ್ರಾಮರೇಂದ್ರರಿಗೂ ಆ ಅಸ್ತ್ರದ ಮೇಲೆ ಕೈಮಾಡಲು ಸಾಧ್ಯವಿರಲಿಲ್ಲ. ಈ ವರಾಹನ ದಾಡೆಯನ್ನು ಹಿಂದಕ್ಕೆ ಶ್ರೀ ಕೃಷ್ಣನು ನರಕಾಸುರನಿಗೆ ಕೊಟ್ಟಿದ್ದನು. ಅವನಿಂದ ಅದು ಭಗದತ್ತನಿಗೆ ಬಂದಿತ್ತು. ಅದು ವೈಷ್ಣವಾಸ್ತ್ರವಾದುದರಿಂದ ಶ್ರೀ ಕೃಷ್ಣನಲ್ಲದೆ ಇನ್ನಾರಿಗೂ ಮಣಿಯುವಂತಿರಲಿಲ್ಲ. ಅಂತೆಯೆ ಶ್ರೀಕೃಷ್ಣನೇ ಅದನ್ನು ಉಪಸಂಹರಿಸಬೇಕಾಯಿತು. ಶ್ರೀಕೃಷ್ಣನು ಪಾರ್ಥನ ಮನಸ್ಸನ್ನು ತಿಳಿಯಾಗಿಸಿ, ಇನ್ನು

ಸುಪ್ರತೀಕ ಗಜವನ್ನು ಬಾಣದಿಂದ ಸಂಹರಿಸುವಂತೆ ಆದೇಶಿಸುತ್ತಾನೆ. ಪಾರ್ಥನು ಸುಪ್ರತೀಕರನ್ನು ಕೂರಂಬಿನಿಂದ ಕೋದು ಬಿಡುತ್ತಾನೆ. ದಿಕ್ಕರಿಯು ನೆಲಕ್ಕೆ ಕೆಡೆಯುತ್ತದೆ. ಆ ಮೇಲೆ ಪಾರ್ಥನು ಭಗದತ್ತನನ್ನು ತನ್ನ ಸಾಯಕಾಸ್ತ್ರದಿಂದ ತುಡುಕುತ್ತಾನೆ. ಭಗದತ್ತನೂ ಸುಪ್ರತೀಕದೊಂದಿಗೆ ನೆಲಕ್ಕುರುಳುತ್ತಾನೆ. ಹೀಗೆ ಅಸಹಾಯಕ ಪ್ರಸಂಗ ಬಂದಾಗಲೆಲ್ಲ ಶ್ರೀಕೃಷ್ಣನೆ ಮುಂದಾಗಿ ಪಾಂಡವರ ಪ್ರಾಣ ರಕ್ಷಣೆ ಮಾಡುತ್ತಾನೆ.

ಇನ್ನೊಂದು ಇಂತಹದೆ ಪ್ರಸಂಗ 'ಅಶ್ವತ್ಥಾಮ'ವೆಂಬ ಗಜವು ಹತವಾಗಲು 'ಅಶ್ವತ್ಥಾಮಾ ಹತಃ' ಎಂದು ಕೂಗಿ ದ್ರೋಣಾಚಾರ್ಯನು ಪುತ್ರಮೋಹದಿಂದ ಸಾಯುವಂತೆ ಹೂಡಿದ ಆಟವೂ ಶ್ರೀಕೃಷ್ಣನದೆ. ಇದರ ಪಾಪ ತನಗೇಕೆ ಎಂದು ಧರ್ಮನು ಅಂದುಕೊಂಡು ಸಮಾಧಾನ ತಂದುಕೊಂಡಿರಬೇಕು. ಆದರೆ ಕ್ರುದ್ಧನಾದ ಅಶ್ವತ್ಥಾಮನು ನಾರಾಯಣಾಸ್ತ್ರವನ್ನು ಹಿಡಿದು ಪ್ರಳಯ ರುದ್ರನಂತೆ ಮುನಿದು ನಿಂತಾಗ ಪಾಂಡವರೂ ಅವರ ಸೈನ್ಯವೂ ತಲ್ಲಣಿಸಿ ಹೋಗುತ್ತಾರೆ. ಅಶ್ವತ್ಥಾಮನು ಬಿಟ್ಟ ನಾರಾಯಣಾಸ್ತ್ರವು ಉರಿಯನುಗುಳುತ್ತ ಪ್ರಳಯಕಾರಿಯಾಗಿ ಪಾಂಡವ ಸೇನೆಯನ್ನು ನುಂಗಲು ಬಾಯ್ತೆರೆಯಿತು. ಇದನ್ನರಿತ ಮುರಹರನು ಪಾಂಡವ ನಾಯಕರಿಗೆಲ್ಲಾ ತಂತಮ್ಮ ಶಸ್ತ್ರಗಳನ್ನು ಕೆಳಗಿಟ್ಟು ಆ ಮಾರಕಾಸ್ತ್ರಕ್ಕೆ ಶರಣು ಬರಲು ಹೇಳಿದನು. ಹೀಗೆ ಶರಣು ಬಂದವರನ್ನು ಆ ನಾರಾಯಣಸ್ತ್ರವು ಘಾತಿಸುತ್ತಿರಲಿಲ್ಲ. ಆದರೆ ಪವನಸುತ ಭೀಮನು ಮಾತ್ರ ಅಹಂಕಾರದಿಂದ ಕೈದುವ ನಿಳುಹದೆ ಆ ಅಸ್ತ್ರಕ್ಕೆ ಎದುರಾಗಿ ನಿಂತನು.

ದೇಹ ಕೀರ್ತಿಗಳೊಳಗೆ ನಿಲುವುದು
ದೇಹವೊ ಕೀರ್ತಿಯೊ ಮುರಾಂತಕ
ಬೇಹುದನು ಬೆಸಸಿದೊಡೆ ಮಾಡೆನು, ಬಲ್ಲಿರೆನ್ನನುವ ॥

ಎಂದು ಧಿಕ್ಕರಿಸಿ ಘಟ್ಟಿಸಿ ನಿಲ್ಲುತ್ತಾನೆ. ಆದರೆ ಕೃಷ್ಣನು ಬಲವಂತ ದಿಂದ ಭೀಮನ ಕೈದುವ ಬಿಸುಟು ಚೆಲ್ಲಲು, ನಾರಾಯಣಾಸ್ತ್ರದ ಅಪಾಯಕರ ಬಾಧೆಯಿಂದ ಬದುಕುತ್ತಾನೆ. ಮುಂದೆ ವೇದವ್ಯಾಸ ಮುನಿಗಳು ಬಂದು ನಾರಾಯಣಾಸ್ತ್ರದ ಮಹಿಮೆಯನ್ನು ವಿವರಿಸಿ ಅವರ ಚಿತ್ತಗ್ಲಾನಿಯನ್ನು ಕಳೆದರು. ಶ್ರೀಕೃಷ್ಣನು ನಾರಾಯ-ಣಾಸ್ತ್ರವು ಒಡ್ಡಿದ ಆ ಮಾರಕ ಸಮಯದಲ್ಲಿ ಅಡ್ಡೈಸಿ ಬರದಿದ್ದರೆ ಭೀಮಾರ್ಜುನರ ಸ್ಥಿತಿ ಏನಾಗುತ್ತಿತ್ತೊ !

## ೧೨. ಭಕ್ತಿಯ ಝೇಂಕಾರ ಹಾಗೂ ಶ್ರೀಕೃಷ್ಣನ ಅವತಾರ ಕಾರ್ಯ

ಕುಮಾರವ್ಯಾಸನ ಕಾವ್ಯದಲ್ಲಿ ಶ್ರೀಕೃಷ್ಣನ ಮಹಿಮೆಯನ್ನು ಮನಗಾಣದವರೇ ಇಲ್ಲ. ಸಮಸ್ತ ಪಾತ್ರಗಳೂ ಒಂದಲ್ಲ ಒಂದು ರೀತಿ ಶ್ರೀಕೃಷ್ಣನ ಮಹಿಮೆಯನ್ನರಿತು ನಡೆವವರೆ ಆಗಿದ್ದಾರೆ. ('ಮಹಾಭಾರತ ಸಮೀಕ್ಷೆ'–ನ. ಸುಬ್ರಹ್ಮಣ್ಯಂ. ಪು. ೫೫)

ವಿಷ್ಣುವಿನ ದಶಾವತಾರಗಳಲ್ಲಿ ಕೃಷ್ಣನ ಅವತಾರವು ಎಂಟನೆಯದು. ಛಾಂದೋಗ್ಯ ಉಪನಿಷತ್ತಿನಲ್ಲಿ ದೇವಕೀ ಪುತ್ರ ನಾದ ಕೃಷ್ಣನು ಘೋರ ಆಂಗಿರಸನಿಂದ ಉಪದೇಶ ಪಡೆದನೆಂದು ಉಕ್ತವಾಗಿದ್ದರೂ ಆತನು ಅವತಾರಪುರುಷನೆಂದು ಹೇಳಿಲ್ಲ.

ಋಗ್ವೇದ ಸಂಹಿತೆಯಲ್ಲಿ ವಿಷ್ಣು ಪರವಾದ ಸೂಕ್ತಗಳಿದ್ದರೂ ವಿಷ್ಣುವಿಗೆ ಅಷ್ಟೊಂದು ಮಹತ್ವ ಬಂದಿಲ್ಲ. ಬ್ರಾಹ್ಮಣಗಳ ಕಾಲಕ್ಕೆ ವಿಷ್ಣುವಿನ ಮಹತ್ವ ಬೆಳೆದಿತ್ತು. ಉಪನಿಷತ್ತುಗಳ ಕಾಲಕ್ಕೆ ಇನ್ನೂ ಹೆಚ್ಚಾಗಿ ಬೆಳೆಯಿತು. ಮಹಾಭಾರತದಲ್ಲಿ ವಿಷ್ಣುವಿನ ಅವತಾರವಾದ ಭಗವಾನ್ ಶ್ರೀಕೃಷ್ಣನು ಧರ್ಮಗ್ಲಾನಿಯಾಗಿ ಅಧರ್ಮವು ತಲೆಯೆತ್ತಿದಾಗ 'ಸಂಭವಾಮಿ ಯುಗೇ ಯುಗೇ' ಎಂದು ಘೋಷಿಸಿದ್ದಾನೆ.

ವಸುದೇವಪುತ್ರನಾದ ವಾಸುದೇವ ಕೃಷ್ಣನು ಭಾಗವತ ಪಂಥದ ಉತ್ಪಾದಕನು. ಮಹಾಭಾರತವು ಬೆಳೆದಂತೆ ಭಾಗವತ ಧರ್ಮ ಸಂಸ್ಥಾಪಕನಾದ ವಾಸುದೇವನು ಭಗವಾನ್ ವಾಸುದೇವ ನಾದನು. ಮಹಾಭಾರತದ ಶಾಂತಿಪರ್ವದ ನಾರಾಯಣೀಯ ಭಾಗದಲ್ಲಿ ವಿಷ್ಣು, ಕೃಷ್ಣ ವಾಸುದೇವನ ರೂಪದಿಂದ ಪರಬ್ರಹ್ಮ ನೆಂದು ಕರೆಯಲ್ಪಡುತ್ತಾನೆ. ಈತನೆ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಕರ್ತೃವಾಗುತ್ತಾನೆ. 'ಭಾರತೀಯ ಸಂಸ್ಕೃತಿ ದರ್ಶನ' ಎಂಬ ಗ್ರಂಥದ ೧೮೯ನೆಯ ಪುಟದಲ್ಲಿ ಭಗವದ್ಗೀತೆಯ ಶ್ರೀಕೃಷ್ಣನ ಬಗ್ಗೆ ಹೇಳುತ್ತ— "ಶ್ರೀಕೃಷ್ಣನು ಪುರಾಣಪುರುಷನೂ ನಿಜ; ಐತಿಹಾಸಿಕ ವ್ಯಕ್ತಿಯೂ ನಿಜ. ಹರಿವಂಶಾದಿ ಗ್ರಂಥಗಳಲ್ಲಿ ಶ್ರೀಕೃಷ್ಣನ ವಂಶಾ ವಳಿಯ ಉಲ್ಲೇಖವಿದ್ದರೂ ಪುರಾಣಗಳಲ್ಲಿ ಪ್ರಯುಕ್ತವಾಗಿರುವ ಪಾರಿಭಾಷಿಕ ಶಬ್ದಗಳ ಅರ್ಥವನ್ನೂ ಸಾಂಕೇತಿಕ ಸನ್ನಿವೇಶಗಳ ಅನ್ವಯವನ್ನೂ ಕೇವಲ ಚಾರಿತ್ರಿಕ ದೃಷ್ಟಿಯಿಂದ ನಿರ್ಣಯಿಸು ವುದು ಕಷ್ಟ. ಇಷ್ಟಕ್ಕೂ ಭಾರತೀಯ ತತ್ವದೃಷ್ಟಿಗೆ ತಾತ್ವಿಕ ವಿಮರ್ಶೆಯೇ ಮುಖ್ಯವಾಗಿ ಕಾಲಮಾನಗಳ ವಿಚಾರ ಅಪ್ರಸ್ತುತ ವೆನಿಸಿದಂತಿದೆ." — ಎಂದು ಶ್ರೀ ಶಿ. ವ. ಚೆನ್ನಬಸವೇಶ್ವರರು ಅಭಿಪ್ರಾಯ ಪಡುತ್ತಾರೆ.

ಶ್ರೀಕೃಷ್ಣನ ಮಹಿಮೆಯನ್ನು ಕೊಂಡಾಡಿದ ಪಂಪ, ರುದ್ರ-ಭಟ್ಟ, ಲಕ್ಷ್ಮೀಶ, ಚೌಂಡರಸ, ಚಾಟುವಿಠ್ಠಲ (ನಿತ್ಯಾತ್ಮಶುಕ ಯೋಗಿ), ಮೊದಲಾದ ಕವಿಗಳಲ್ಲಿ ಕುಮಾರವ್ಯಾಸನೆ ಮೇಲುಗೈ ಎನ್ನಬೇಕು. ಕೃಷ್ಣನೆ ಕೇಂದ್ರಬಿಂದುವಾಗಿ ಆತನ ಸುತ್ತಲೂ ಉಳಿದ ಪಾತ್ರ ವರ್ತುಲ ರಚಿತವಾಗಿದೆ. ಕಂಸ ಶ್ರೀಕೃಷ್ಣನ ಸೋದರಮಾವ ನೆಂದು ಒಂದಂಶ ('ಕಂಸ' ಎಂದರೆ ವರ್ತುಲದ ಒಂದು ಭಾಗ) ವಾದರೆ ಕೃಷ್ಣನು ಕೃತ್ಸ್ನ ಎಂದರೆ ಅಖಂಡ ಎಂದು ವರಕವಿ ಬೇಂದ್ರೆಯವರು ಹೇಳಿದ್ದ ಒಂದು ಮಾತನ್ನಿಲ್ಲಿ ನೆನೆಯಬಹುದು. ವೀರನಾರಾಯಣ ಕಿಂಕರನಾದ ಕವಿ ಕೃಷ್ಣನ ಬರವನ್ನೇ ಹಾರೈಸುತ್ತ ಭಾರತ ಕಥೆಯನ್ನು ಮುಂದುವರಿಸುವ ನಾರಣಪ್ಪನಿಗೆ ಶ್ರೀಕೃಷ್ಣನು ಪಾತ್ರವಾಗಿ ಮೊಗದೋರಿದನೆಂದರೆ ತೀರಿತು ಹುಚ್ಚೆದ್ದು ಮೈಮರೆತುಬಿಡುತ್ತಾನೆ. ವೇದಗಳಂತೆ ಕವಿಯು ತಾಳಿಗೆ ಒಣಗುವವರೆಗೂ ಶ್ರೀಕೃಷ್ಣನನ್ನು ಹೊಗಳಿದ್ದೆ ಹೊಗಳಿದ್ದು, ಕೊಂಡಾಡಿದ್ದೆ ಕೊಂಡಾಡಿದ್ದು. ಭಾಗವತ ಕವಿಯಾದ ನಾರಣಪ್ಪ ಭಕ್ತಿರಸನಿರೂಪಣೆಯಲ್ಲಿ ಅಗ್ರೇಸರ. ಹರಿದಾಸರ ಭಕ್ತಿಕೀರ್ತನೆಗಳ ಶ್ರುತಿಗೆ ನಾರಣಪ್ಪನ ಷಟ್ಪದಿ ಝೇಂಕಾರವು ಸ್ಫೂರ್ತಿಯ ಓಂಕಾರವಾಯಿತು.

****

## ಗ್ರಂಥ ಋಣ


೧. 'ಕರ್ನಾಟಕ ಭಾರತ ಕಥಾಮಂಜರಿ' (ಕುಮಾರವ್ಯಾಸ).
೨. 'ಕುಮಾರವ್ಯಾಸ ಪ್ರಶಸ್ತಿ' (ವಿವಿಧ ಲೇಖಕರು)
೩. 'ಮಹಾಭಾರತ ಸಮೀಕ್ಷೆ' (ನ. ಸುಬ್ರಹ್ಮಣ್ಯಂ)
೪. 'ಗದುಗಿನ ಗಂಡುಕವಿ' (ಎನ್ಕೆ)
೫. 'ಕುಮಾರವ್ಯಾಸವಾಣಿ' (ಎಸ್. ವಿ. ರಂಗಣ್ಣ)
೬. 'ಕರ್ನಾಟಕ ಸಾಹಿತ್ಯ ಚರಿತ್ರೆ' (ರಂ. ಶ್ರೀ. ಮುಗಳಿ)
೭. Essays on the Geetha (Sri Aurobindo)
೮. Krishnavatara (Vol. V) (K. M. Munshi)
೯. 'ಕನ್ನಡ ಸಾಹಿತ್ಯ ವಾಹಿನಿ' (ಎನ್ಕೆ)
೧೦. ಕಥನಕುಶಲ ಕವಿ ಲಕ್ಷ್ಮೀಶ (ಡಾ. ವಾ. ದ. ಬೇಂದ್ರೆ)
೧೧. ಕುಮಾರವ್ಯಾಸ– ಜೀವನ ದರ್ಶನ ಮತ್ತು ಕಾವ್ಯಸ್ವರೂಪ (ಕೀರ್ತಿನಾಥ ಕುರ್ತಕೋಟಿ)


****

## ಉಪನ್ಯಾಸ ಗ್ರಂಥಮಾಲೆಯ
## ಇತ್ತೀಚಿನ ಪ್ರಕಟನೆಗಳು

---

೧. ಶರಣರ ಆರ್ಥಿಕ ಚಿಂತನೆ
–ಬಿ. ಎ. ಪಾಟೀಲ

೨. ಜನಪದ ತ್ರಿಪದಿಗಳಲ್ಲಿ ಜೀವನ ಮೌಲ್ಯ
–ಎಂ. ಬಿ. ಹೂಗಾರ

೩. ಮಾನವ ದೇಹದ ಮಿಲಿಟರಿ ಪಡೆ
–ಸ. ಜ. ನಾಗಲೋಟಿಮಠ

೪. ಪ್ರೇಮಚಂದರ ಸಣ್ಣ ಕತೆಗಳು
–ಆರ್. ಎ. ಹೆಗಡೆ

೫. ಪರಿಸರ ಸಂರಕ್ಷಣೆ ಹಾಗೂ ಆರ್ಥಿಕಾಭಿವೃದ್ಧಿ
–ಎನ್. ಆರ್. ರಾವ್

೬. ಚಂಡಮಾರುತಗಳು
–ಎಸ್. ಜಿ. ಕದರಮಂಡಲಗಿ

೭. ವಿಜ್ಞಾನವು ಅಪರಾಧಿಗಳನ್ನು ಹಿಡಿದು ಕೊಡಬಲ್ಲದೆ!
–ಬಿ. ಎಸ್. ಗಿರೆಪ್ಪಗೌಡರ

೮. ಪ್ಲೇಟೋನ ಆದರ್ಶ ರಾಜ್ಯ
–ಟಿ. ಮಲ್ಲಪ್ಪ

೯. ಮಕ್ಕಳ ಮಾರಕ ರೋಗಗಳು ಹಾಗೂ ಪ್ರತಿಬಂಧಕ–ಉಪಾಯಗಳು
–ಆರ್. ಸಿ. ಅಗಡಿ

೧೦. ಎಲ್ಲಮ್ಮನ ಜೋಗತಿಯರು ಹಾಗೂ ದೇವದಾಸಿ ಪದ್ಧತಿ
–ಎನ್. ಕೆ. ಕಡೇತೋಟದ

---

**ಪ್ರಸಾರಾಂಗ**
**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩**